॥ ಶ್ರೀರಸ್ತು ॥

ಕವಿಚಕ್ರವರ್ತಿಕವಿರನ್ನವಿರಚಿತಂ

ಸಂಪಾದಕ ಮತ್ತು ಪ್ರಕಾಶಕ

ವಿದ್ವಾನ್ ಕೆ. ವಿ. ಕೃಷ್ಣ ಭಟ್ಟ, ಬಿ. ಎ., ಬಿ. ಒ. ಎಲ್.,
ಕಾವೇರಿಕಾನ, ಕುಂಬಳೆ ಪೋಸ್ಟ್, ದ. ಕನ್ನಡ.

ಎರಡೂವರೆ ರೂಪಾಯಿ.

# ಸಾಹಸಭೀಮವಿಜಯಂ

## —: [ಗದಾಯುದ್ಧಂ]

ಅಮ್ಮೆಂಬಳ ಶಂಕರನಾರಾಯಣರಾ, ವಿದ್ವಾನ್, ಇವರಿಗೆ-
ಪ್ರೀತಿಯ ನೆನಪಿಗಾಗಿ-

ಕೆ. ವಿ. ಕೃಷ್ಣಭಟ್ಟ.
(ಕಾವೇರಿಕಾನ)
೨೫-೮-೧೯೫೦.

॥ ಶ್ರೀರಸ್ತು ॥

ಕವಿಚಕ್ರವರ್ತಿಕವಿರನ್ನವಿರಚಿತಂ

# ಸಾಹಸಭೀಮವಿಜಯಂ

## [ಗದಾಯುದ್ಧಂ]

ಸಂಪಾದಕ ಮತ್ತು ಪ್ರಕಾಶಕ

ವಿದ್ವಾನ್ ಕೆ. ವಿ. ಕೃಷ್ಣ ಭಟ್ಟ, ಬಿ. ಎ., ಬಿ. ಒ. ಎಲ್.,

ಕಾವೇರಿಕಾನ, ಕುಂಬಳೆ ಪೋಸ್ಟ್, ದ. ಕನ್ನಡ.

॥ ಶ್ರೀರಸ್ತು ॥

# ಮುನ್ನುಡಿ

ರನ್ನನ ಗದಾಯುದ್ಧವೆಂದು ಪ್ರಸಿದ್ಧವಾದ ಈ ಶ್ರೇಷ್ಠಕಾವ್ಯವನ್ನು
ತ್ತಮೊದಲು ಮುದ್ರಿಸಿ ಪ್ರಚಾರಕ್ಕೆ ತಂದ ಯಶಸ್ಸು ಮೈಸೂರಿನ
ವ್ಯಮಂಜರಿ ಎಂಬ ಮಾಸಪತ್ರಿಕೆಯ ಸಂಪಾದಕರೂ ಕಾವ್ಯಕಲಾನಿಧಿ
ಬ ಪತ್ರಿಕೆಯ ಪ್ರವರ್ತಕರೂ ಆಗಿದ್ದ ಮಂ॥ ಆ॥ ರಾಮಾನುಜಯ್ಯಂ
ರ್ಯರಿಗೇ ಸಲ್ಲತಕ್ಕದ್ದು. ಅವರು ಈ ಉದ್ಗ್ರಂಥದ ಪ್ರಥಮಮುದ್ರ
ನ್ನು ೧೮೯೫ರಲ್ಲಿ ಪ್ರಕಟಿಸಿ, ೧೯೨೬ರಲ್ಲಿ ಇದನ್ನು ಪುನಃ
ೂಲಾಗ್ರವಾಗಿ ಪರಿಷ್ಕರಿಸಿ ಕವಿಚರಿತ್ರ ಗ್ರಂಥವಿಮರ್ಶೆ ಇತ್ಯಾದಿಗಳೊ
ಪರಿಷ್ಕೃತತೃತೀಯಮುದ್ರಣವಾಗಿ ಪ್ರಕಾಶಕ್ಕೆ ತಂದು ಕನ್ನಡಿಗರ
ಜ್ಞತೆಗೆ ಮತ್ತಷ್ಟು ಪಾತ್ರರಾದರು. ಈ ಗ್ರಂಥದ ಸಂಪಾದನಪರಿಷ್ಕ
ಗಳಲ್ಲಿ ಅಂದಿಗೆ ಅವರು ಎಷ್ಟು ಮಾಡಬಹುದಾಗಿತ್ತೋ ಅಷ್ಟನ್ನು
ಶ್ರಮವಹಿಸಿ ಮಾಡಿದ್ದಾರೆಂಬುದು ಎಲ್ಲರೂ ಒಪ್ಪತಕ್ಕ
ಯವೇ. ಅಂದಿನಿಂದ ಇದು ಕನ್ನಡಿಗರೆಲ್ಲರ ವಿಶೇಷ ಆದರಕ್ಕೆ
ತ್ರವಾಗಿ ಕನ್ನಡದ ಉತ್ತಮಕಾವ್ಯಗ್ರಂಥಗಳಲ್ಲಿ ರತ್ನಪ್ರಾಯವಾಗಿ
ರೆಯುತ್ತಿದೆ.

ಇತ್ತೀಚೆಗೆ ಕೆಲವು ವರ್ಷಗಳಿಂದ ಈ ಕಾವ್ಯರತ್ನದ ಮುದ್ರಿತಪ್ರತಿ
ಸಿಕ್ಕದಿರುವುದರಿಂದಲೂ, ಕಾಲೇಜು ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕ
ನಿಯಮಿತವಾದ ಇದರ ಆವಶ್ಯಕತೆಯು ಹೆಚ್ಚಾಗಿದ್ದುದು ಕಂಡು
ದುದರಿಂದಲೂ, ಕವಿಚಕ್ರವರ್ತಿಕವಿರನ್ನನ ಸಹಸ್ರವಾರ್ಷಿಕೋತ್ಸ
ಕನ್ನಡನಾಡಿನಲ್ಲೆಲ್ಲ ನೆರವೇರಿದ ಈ ಶುಭಸಂದರ್ಭದಲ್ಲಿಯೇ
ನ್ನು ಪ್ರಕಟಿಸಿ ತನ್ಮೂಲಕ ಕವಿರನ್ನನಿಗೆ ಶ್ರದ್ಧಾಂಜಲಿಯನ್ನರ್ಪಿಸುವ
ಚ್ಛೆಯುಂಟಾದುದರಿಂದಲೂ, ನಾವು ಈಗ ಇದನ್ನು ನವೀನವಾಗಿ
ಾದಿಸಿ ಪ್ರಕಟಿಸಿದುದಾಗಿದೆ. ಯಾರೊಡನೆಯೂ ಸ್ಪರ್ಧಿಸುವ ಉದ್ದೇಶ

ದಿಂದಾಗಲಿ, ಕೇವಲ ಲಾಭಬಡಕತನದಿಂದಾಗಲಿ ಈ ಸಾಹಸ ಕಾರ್ಯಕ್ಕೆ ಕಯ್ಯಿಕ್ಕಿಲ್ಲವೆಂಬುದನ್ನು ಕನ್ನಡಿಗರಲ್ಲಿ ವಿನಂತಿಮಾಡಿ ಕೊಳ್ಳುತ್ತೇನೆ.

ಇದನ್ನು ಕೆಳಗೆ ವಿವರಿಸುವಂತೆ ಎರಡು ಮೂಲಮಾತೃಕೆಗಳ ಆಧಾರದಿಂದ ಸಂಪಾದಿಸಿ ಪರಿಷ್ಕರಿಸಲಾಗಿದೆ—

(೧) ಮದ್ರಾಸಿನ ಓರಿಯೆಂಟಲ್ ಮ್ಯಾನುಸ್ಕ್ರಿಪ್ಟ್ಸ ಲೈಬ್ರೆರಿಯಲ್ಲಿರುವ ಜೀರ್ಣವಾದ ತಾಳೆಯೋಲೆಯ ಪ್ರತಿಯನ್ನು ಪುನರುಜ್ಜೀವಿತಗೊಳಿಸಿ ಪ್ರತಿಮಾಡಿದ ಕಾಗದದ ಪ್ರತಿಯ (Restored Copy D. 2065) ಯಥಾಪ್ರತಿ [ನಕಲು]. ನನ್ನ ಕೋರಿಕೆಯನ್ನು ಮನ್ನಿಸಿ ಆ ಲೈಬ್ರೆರಿಯ ಕ್ಯೂರೇಟರರು ಈ ಪ್ರತಿಯನ್ನು ಬರೆಯಿಸಿ ನನಗೆ ಕಳಿಸಿಕೊಟ್ಟು, ಸಂಪಾದಿಸಿ ಪ್ರಕಟಿಸಲು ಅನುಮತಿಯನ್ನಿತ್ತರು. ಇದರಲ್ಲಿ ಪ್ರಥಮಾಶ್ವಾಸವು ಇಲ್ಲ; ದ್ವಿತೀಯಾಶ್ವಾಸದಲ್ಲಿ ಕೆಲವೇ ಪದ್ಯಗಳು ಅಪೂರ್ಣವಾಗಿ ಇವೆ. ತೃತೀಯಾಶ್ವಾಸವು ಸುಮಾರಾಗಿ ಇದೆ. ಚತುರ್ಥಾಶ್ವಾಸದಿಂದ ದಶಮಾಶ್ವಾಸದ ಅಂತ್ಯದ ವರೆಗೆ ಗ್ರಂಥವು ಸಂಪೂರ್ಣವಾಗಿ ಇದ್ದರೂ ಅಲ್ಲಲ್ಲಿ ಗ್ರಂಥಪಾತವು ವಿಶೇಷವಾಗಿ ಇದೆ. ಇದ್ದ ಮಟ್ಟಿಗೆ ಇದು ಸಾಮಾನ್ಯವಾಗಿ ಉತ್ತಮಪಾಠಗಳನ್ನೊಳಕೊಂಡಿದೆಯೆನ್ನಬಹುದು. ಇದಕ್ಕೆ **ಮದ್ರಾಸು ಪ್ರತಿ** ಎಂಬ ಸಂಕೇತವನ್ನು ಕೊಟ್ಟಿದ್ದೇನೆ.

(೨) ಮೈಸೂರಿನ ಓರಿಯೆಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟಿನ ಸೂಪರಿಂಟೆಂಡೆಂಟರು (Superintendent, Oriental Research Institute, Mysore) ನನ್ನ ಕೋರಿಕೆಯ ಮೇರೆಗೆ ಬರೆಯಿಸಿ ಕಳಿಸಿಕೊಟ್ಟ ಕಾಗದದ ಪ್ರತಿಯು. ಇದು ಮೈಸೂರು ಸರಕಾರದ ಓರಿಯೆಂಟಲ್ ಲೈಬ್ರೆರಿಯಲ್ಲಿದ್ದ ಮಿ॥ ರೈಸ್ ಸಾಹೇಬರು ಬರಿಯಿಸಿಟ್ಟಿದ್ದ (K. A. 50) ಪ್ರತಿಯ ಯಥಾಪ್ರತಿಯೆಂದು ತೋರುತ್ತದೆ. ಇದರಲ್ಲಿ ಗ್ರಂಥವು ಆಮೂಲಾಗ್ರವಾಗಿ ಇದೆ. ಗ್ರಂಥಪಾತವು ಕೆಲವು ಕಡೆಗಳಲ್ಲಿ ಮಾತ್ರ ಉಂಟು. ಇದಕ್ಕೆ **ಮೈಸೂರು ಪ್ರತಿ** ಎಂಬ ಸಂಕೇತವನ್ನು ಕೊಟ್ಟಿದ್ದೇನೆ.

ಸಂಪೂರ್ಣಗ್ರಂಥಸಂಪಾದನದಲ್ಲಿ ಮೈಸೂರು ಪ್ರತಿಯ ಆನುಪೂರ್ವಿಯನ್ನು ಅನುಸರಿಸಿದ್ದರೂ, ಸಂಪಾದಿಸಿ ಪರಿಷ್ಕರಿಸಿ ಪಾಠಗಳನ್ನು ನಿರ್ಧರಿಸುವೆಡೆಗಳಲ್ಲೆಲ್ಲ ಸಾಧ್ಯವಿದ್ದಷ್ಟು ಮದ್ರಾಸುಪ್ರತಿಯ ಪಾಠಗಳಿಗೇ ಪ್ರಾಧಾನ್ಯವನ್ನು ಕೊಡಲಾಗಿದೆ. ದಶಮಾಶ್ವಾಸದಲ್ಲಂತೂ ಇದು ಇನ್ನೂ ವಿಶೇಷವಾಗಿದೆ. ಮದ್ರಾಸುಪ್ರತಿಯ ಪಾಠಗಳು ದೊರಕದೆಡೆಗಳಲ್ಲಿ ಮಾತ್ರ ಮೈಸೂರುಪ್ರತಿಯ ಪಾಠಗಳನ್ನು ಅವಲಂಬಿಸಿದ್ದೇನೆ. ಮೈಸೂರುಪ್ರತಿಗೂ ಮೈಸೂರು ಕಾವ್ಯಕಲಾನಿಧಿ ಪ್ರವರ್ತಕರ ಪರಿಷ್ಕೃತ ತೃತೀಯ ಮುದ್ರಣದ ಪ್ರತಿಗೂ (ಇದಕ್ಕೆ **ಮುದ್ರಿತ ಪುಸ್ತಕ**ವೆಂದು ಸಂಕೇತವನ್ನು ಮಾಡಿದ್ದೇನೆ) ಪಾಠಾಂತರಗಳಲ್ಲಿ ವಿಶೇಷ ವ್ಯತ್ಯಾಸವು ತೋರಿಬರಲಿಲ್ಲವಾದುದರಿಂದ, ಅಡಿಟಿಪ್ಪಣಿಗಳಲ್ಲಿ (Footnotes) ಪಾಠಾಂತರಗಳನ್ನು ಕೊಡುವೆಡೆಗಳಲ್ಲಿ ಹೆಚ್ಚಾಗಿ ಮುದ್ರಿತ ಪುಸ್ತಕದ ಪಾಠಾಂತರ (ಮು. ಪು. ಪಾ.)ವೆಂದೇ ಸೂಚಿಸಲಾಗಿದೆ. ಮು. ಪು. ಪಾ.ಗಳೇ ಅನೇಕ ಸ್ಥಳಗಳಲ್ಲಿ ಮೈಸೂರು ಪ್ರತಿಯ ಪಾಠಾಂತರಗಳೂ ಆಗಿವೆಯೆಂದು ತಿಳಿಯತಕ್ಕದ್ದು. ಕೆಲವು ಕಡೆಗಳಲ್ಲಿ ಪಾಠಗಳನ್ನು ನಿರ್ಧರಿಸುವ ಸಂದರ್ಭದಲ್ಲಿ, ನಾಗವರ್ಮನ ಕಾವ್ಯಾವಲೋಕನಂ, ಕೇಶಿರಾಜನ ಶಬ್ದಮಣಿದರ್ಪಣಂ, ಸಾಳ್ವನ ರಸರತ್ನಾಕರಂ ಎಂಬ ಗ್ರಂಥಗಳಲ್ಲಿ ದೊರಕುವ ಈ ಗ್ರಂಥದಿಂದ ಉದಾಹೃತವಾದ ಪದ್ಯಗಳ ಪಾಠಗಳನ್ನೂ ಸ್ವೀಕರಿಸಲಾಗಿದೆ. ಒಂದೆರಡುಕಡೆ, ಭಟ್ಟನಾರಾಯಣವಿರಚಿತ ವೇಣೀಸಂಹಾರ ನಾಟಕ (ಸಂಸ್ಕೃತ)ದ ಶ್ಲೋಕಗಳ ಪಾಠವನ್ನಾಧರಿಸಿ, ತಿದ್ದಿಕೊಂಡಿರುತ್ತೇನೆ. ಇದಲ್ಲದೆ, ಗ್ರಂಥಪಾತವಿದ್ದಲ್ಲಿ ಸಂದರ್ಭೋಚಿತವಾಗಿ ಸಾಧ್ಯವಿದ್ದಷ್ಟು ಕವಿರನ್ನನ ಶೈಲಿಗೆ ಹೊಂದಿಕೆಯಾಗುವಂತೆ ಪಾಠಗಳನ್ನು ಊಹಿಸಿ ಬರೆದು ಕೂಡಿಸಿ ಗ್ರಂಥವನ್ನು ಸಂಪೂರ್ಣಗೊಳಿಸಿರುತ್ತೇನೆ. ಗ್ರಂಥಪಾತವಿಲ್ಲದೆ ಗ್ರಂಥವು ಸಾಧ್ಯವಿದ್ದಮಟ್ಟಿಗೆ ಸಂಪೂರ್ಣವಾಗಿ ಇರಲಿ ಎಂಬ ಅಭಿಲಾಷೆಯಿಂದ ಮಾತ್ರ ಈ ಸಾಹಸವನ್ನು ಕಯ್ಕೊಂಡೆನಲ್ಲದೆ, ರನ್ನನ ಕಾವ್ಯವನ್ನು ತಿದ್ದುತ್ತೇನೆಂಬ ಧಾರ್ಷ್ಟ್ಯದಿಂದಲ್ಲವಾದುದರಿಂದ, ಈ ವಿಷಯದಲ್ಲಿ ವಿದ್ವಾಂಸರು ನನ್ನನ್ನು ಕ್ಷಮಿಸುವರೆಂದು ನಂಬಿದ್ದೇನೆ. ಭಾಗ್ಯವಶಾತ್ ಇದು ವಿದ್ವಾಂಸರಾದ ಕನ್ನಡ

ಸಾಹಿತಿಗಳಿಗೆ ಮೆಚ್ಚುಗೆಯಾಯ್ತೆಂದಾದರೆ ನನ್ನೀ ಗ್ರಂಥಸಂಪಾದನ ಶ್ರಮವು ಸಾರ್ಥಕವಾಯ್ತೆಂದೆಣಿಸುವೆನು.

ಇದನ್ನು ಸಂಪಾದಿಸಿ, ಪರಿಷ್ಕರಿಸಿ, ಪ್ರಕಟಿಸುವುದಕ್ಕಾಗಿ, ತಮ್ಮಲ್ಲಿರುವ ಗದಾಯುದ್ಧದ ಮೂಲಮಾತೃಕೆಗಳ ಪ್ರತಿಗಳನ್ನು ನನ್ನ ಕೋರಿಕೆಯ ಮೇರೆಗೆ ನನಗೆ ಸಕಾಲದಲ್ಲಿ ಒದಗಿಸಿಕೊಟ್ಟು ಪ್ರಕಟಿಸುವುದಕ್ಕೆ ಅನುಮತಿಯನ್ನಿತ್ತು ಸಹಾಯಮಾಡಿದ ಮದ್ರಾಸಿನ ಗವರ್ನಮೆಂಟ್ ಓರಿಯೆಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯ ಕ್ಯೂರೇಟರ್ (The Curator, Government Oriental Mss. Library, Madras) ಇವರಿಗೂ, ಮೈಸೂರು ಓರಿಯೆಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟಿನ ಸೂಪರಿಂಟೆಂಡೆಂಟ್ (The Superintendent, Oriental Research Institute, Mysore) ಇವರಿಗೂ ಕೃತಜ್ಞತಾಪೂರ್ವಕ ವಂದನೆಗಳನ್ನರ್ಪಿಸುತ್ತೇನೆ.

ಈ ಗ್ರಂಥದ ಮುದ್ರಣಕಾಲದಲ್ಲಿ ಇದರ ಅಚ್ಚಿನ ಕರಡುಪ್ರತಿಗಳನ್ನು (Proof-sheets) ತಿದ್ದುವುದರಲ್ಲಿ ನನಗೆ ಸಂಪೂರ್ಣವಾಗಿ ನೆರವಾದ ನನ್ನ ತಮ್ಮ, ಶ್ರೀಯುತ ನೋಳಿಯಾರು ಶಂಕರನಾರಾಯಣ ಭಟ್ಟ, ವಿದ್ವಾನ್ (ಮಂಗಳೂರು ಗವರ್ನಮೆಂಟು ಕಾಲೇಜಿನ ಕನ್ನಡ ಪಂಡಿತರು) ಇವರ ಬಂಧುಪ್ರೇಮವನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಂಗಳೂರು ಉದಯ ಪ್ರಿಂಟರಿ ಎಂಡ್ ಪಬ್ಲಿಕೇಷನ್ಸ್ ಲಿಮಿಟೆಡ್-ಸಂಸ್ಥೆಯವರಿಗೆ ನನ್ನ ಧನ್ಯವಾದಗಳು.

ಇಂತು ಬಿನ್ನಯಿಸುವ,
ಸಜ್ಜನವಿಧೇಯ,

ಕಾವೇರಿಕಾನ, ಎಡನಾಡು, ವಿರೋಧಿ ಸಂ॥ದ, ಧನು. } ಕೆ. ವಿ. ಕೃಷ್ಣಭಟ್ಟ; ಕಾವೇರಿಕಾನ.

॥ ಶ್ರೀರಸ್ತು ॥

# ಸಂಕ್ಷಿಪ್ತ ಕವಿಕಾವ್ಯಪರಿಚಯವು.

**ಸಾಹಸಭೀಮವಿಜಯಂ ಎಂಬ ಕಾವ್ಯದ ಪ್ರಾಶಸ್ತ್ಯವು:—** ಕವಿಚಕ್ರವರ್ತಿ ಕವಿರನ್ನವಿರಚಿತವಾದ ಈ ಸಾಹಸಭೀಮವಿಜಯವು ರೂಢಿಯಲ್ಲಿ ರನ್ನನ ಗದಾಯುದ್ಧವೆಂದೇ ಪ್ರಸಿದ್ಧವಾಗಿದೆ. ಪಂಪನ ವಿಕ್ರಮಾರ್ಜುನವಿಜಯವೊಂದನ್ನು ಬಿಟ್ಟರೆ ಹಳಗನ್ನಡ ಕಾವ್ಯಗಳಲ್ಲೆಲ್ಲ ಇಷ್ಟೊಂದು ಜನಪ್ರಿಯವಾಗಿ ಪ್ರಚಾರಕ್ಕೆ ಬಂದ ಕಾವ್ಯವು ಬೇರೊಂದಿಲ್ಲ. ಅದರಲ್ಲಿಯೂ ವೀರರಸಪ್ರಧಾನವಾದ ಕಾವ್ಯಗಳಲ್ಲಿ ಇದು ಅಗ್ರಸ್ಥಾನವನ್ನು ಪಡೆದಿದೆ. ಒಂದೆರಡು ವಿಷಯಗಳಲ್ಲಿ ಇದು ಪಂಪನ ವಿಕ್ರಮಾರ್ಜುನವಿಜಯವನ್ನೂ ಮೀರಿಸುವಂತೆ ರಚಿಸಲ್ಪಟ್ಟಿದೆಯೆಂದರೂ ಸಲ್ಲುವುದು. ಷಟ್ಪದೀಕಾವ್ಯಗಳಲ್ಲಿ ಲಕ್ಷ್ಮೀಶನ ಜೈಮಿನಿ ಭಾರತವು ಹೇಗೋ ಹಾಗೆ ಹಳಗನ್ನಡದ ಚಂಪೂ ಕಾವ್ಯಗಳಲ್ಲಿ ಕವಿರನ್ನನ ಈ ಗದಾಯುದ್ಧವೂ ಬಹುಜನಪ್ರಿಯವಾಗಿ ಪ್ರಚಾರಗೊಳ್ಳುವುದಕ್ಕೆ ಇದರ ಪರಮೋತ್ಕೃಷ್ಟತೆಯೇ ಕಾರಣವು. 'ನಾತಿಸಂಕ್ಷೇಪವಿಸ್ತರ'ವಾದ ಪ್ರಮಾಣದಲ್ಲಿ ನಿರ್ದುಷ್ಟವಾದ ತಿರುಳ್ಕನ್ನಡದಲ್ಲಿ ಅರ್ಥಪುಷ್ಟಿಯುಳ್ಳ ರಸವತ್ತಾದ ವೀರಶೈಲಿಯಲ್ಲಿ ಹೃದಯಂಗಮವಾದ ರೀತಿಯಲ್ಲಿ ರಚಿಸಲ್ಪಟ್ಟಿರುವುದರಿಂದ ಇದು ಕನ್ನಡಿಗರ ಕೊಂಡಾಟದಕಾವ್ಯವಾಗಿದೆಯೆನ್ನಲಡ್ಡಿಯಿಲ್ಲ. ಈ ಗ್ರಂಥದಿಂದ ಹಲವು ಪದ್ಯಗಳನ್ನು ಲಾಕ್ಷಣಿಕರು ತಮ್ಮ ಲಕ್ಷಣಗ್ರಂಥಗಳಲ್ಲಿ ಉದಾಹರಣೆಗಾಗಿ ತೆಗೆದುಕೊಂಡು ಇದರ ಯೋಗ್ಯತೆಯನ್ನು ಸಾರಿದ್ದಾರೆ. ಇದು ಮುದ್ರಿತವಾಗಿ ಪ್ರಚಾರಕ್ಕೆ ಬಂದಂದಿನಿಂದ ಈ ಕಾವ್ಯವನ್ನೂ ಕಾವ್ಯಕರ್ತೃವಾದ ಕವಿರನ್ನನನ್ನೂ ಕುರಿತು ಅನೇಕವಿದ್ವಾಂಸರು ಪ್ರಶಂಸಾಪರವಾದ ವಿಮರ್ಶೆಗಳನ್ನೂ ಪ್ರಶಸ್ತಿಗಳನ್ನೂ ವಿಚಾರಪೂರಿತಲೇಖಗಳನ್ನು ಬರೆದು ಈ ಕಾವ್ಯದ ಪ್ರಾಶಸ್ತ್ಯವನ್ನೂ ಕವಿರನ್ನನ ಮಹಿಮೋನ್ನತಿಯನ್ನೂ ಕೊಂಡಾಡಿದ್ದಾರೆ. ಕವಿರನ್ನನ ಸಹಸ್ರವಾರ್ಷಿಕೋತ್ಸವವನ್ನು ಈ ವರ್ಷ ಕನ್ನಡನಾಡಿನಲ್ಲೆಲ್ಲ ಜರಗಿಸಿ, ಕನ್ನಡಿಗರು ಆತನ ಬಗೆಗೆ ತಮಗಿದ್ದ ಅಭಿಮಾನ

ಗೌರವಗಳನ್ನು ಸಲ್ಲಿಸುವುದರ ಮೂಲಕ ಗದಾಯುದ್ಧದ ಪ್ರಚಾರಕ್ಕೂ ವಿಶೇಷ ಉತ್ಸಾಹವನ್ನು ತೋರ್ಪಡಿಸಿದ್ದಾರೆ. ಕನ್ನಡಿಗರಿಂದ ಇಷ್ಟೊಂದು ಶ್ರದ್ಧಾಪೂರ್ವಕವಾದ ಸೇವೆಯನ್ನು ಪಡೆದ ಕಾವ್ಯವು ಬೇರೊಂದಿಲ್ಲ ವೆಂದರೆ ಅತಿಶಯೋಕ್ತಿಯಾಗದು.

**ರನ್ನಕವಿಯ ಜೀವನ ಚರಿತವು:**—ಕವಿರನ್ನನು ಜೈನನು. ಕವಿ ರತ್ನ ಎಂದರೂ ಕವಿರನ್ನ ಎಂದರೂ ಒಬ್ಬನೇ. 10ನೆಯ ಶತಮಾನದ ಕವಿ ಶ್ರೇಷ್ಠರಾದ ಪಂಪ ಪೊನ್ನರಸರಿಸಮಾನಯೋಗ್ಯತೆಗೆ ಅರ್ಹನು. ಇವನು ಶಕ 871 (ಕ್ರಿ. ಶ. 949)ನೆಯ ಸೌಮ್ಯಸಂವತ್ಸರದಲ್ಲಿ, ಅಂದಿನ ವಿಸ್ತಾರ ವಾದ ಕನ್ನಡನಾಡಿನಲ್ಲಿ ಬಳಪಟ್ಟಿದ್ದ ಬೆಳುಗುರೆನಾಡಿನ ಬೆಳುಗುಲಿ ಅಯ್ನೂರರ ಜಂಬುಖಂಡಿ ಎಪ್ಪತ್ತರಲ್ಲಿ ಶ್ರೇಷ್ಠವಾದ ಮುದುವೊಳಲು ಎಂಬ ಊರಲ್ಲಿ ಹುಟ್ಟಿದನು. ಇವನು ಬಳೆಗಾರಕುಲದವನು. ಇವನ ತಂದೆ ಜಿನವಲ್ಲಭೇಂದ್ರನೆಂಬವನು; ತಾಯಿ ಅಬ್ಬಲಬ್ಬೆಯೆಂಬವಳು. ಇವನಿಗೆ ದೃಢಬಾಹು, ರೇಚಣ, ಮತ್ತು ಮಾರಮಯ್ಯ ಎಂಬ ಮೂವರು ಅಣ್ಣಂದಿರಿದ್ದರು. ಬಾಲ್ಯದಿಂದ ತೊಡಗಿ ಇವನು ವಿದ್ಯಾರ್ಜನೆಯಲ್ಲಿ ಆಸಕ್ತನಾಗಿ ಯೋಗ್ಯಗುರುಗಳನ್ನಾಶ್ರಯಿಸಿ ವ್ಯುತ್ಪನ್ನಮತಿಯೂ ಪ್ರತಿಭಾ ಶಾಲಿಯೂ ಮೇಧಾವಂತನೂ ಆದುದರಿಂದ ತೀವ್ರದಲ್ಲಿಯೇ ಸಂಸ್ಕೃತ–ಪ್ರಾಕೃತ–ಕನ್ನಡ ಭಾಷೆಗಳಲ್ಲಿ ನಿರಂತರಶ್ರಮದಿಂದ ಪಾಂಡಿತ್ಯವನ್ನು ಸಂಪಾದಿಸಿಕೊಂಡನು. ಜೈನೇಂದ್ರವ್ಯಾಕರಣ ಶಬ್ದಾನುಶಾಸನ ಪಾಣಿನೀಯಅಷ್ಟಾಧ್ಯಾಯಿ ಮುಂತಾದ ಸಂಸ್ಕೃತವ್ಯಾಕರಣ ಗ್ರಂಥಗಳನ್ನು ಅಭ್ಯಸಿಸಿ ವ್ಯಾಕರಣಪರಿಣತನೆನಿಸಿಕೊಂಡನು. ಬಾಣಭಟ್ಟಕಾಳಿದಾಸಾದಿ ಸಂಸ್ಕೃತ ಕವಿಗಳ ಕಾವ್ಯಗಳನ್ನೂ ಓದಿ ಮನನ ಮಾಡಿಕೊಂಡನು. ಅದರೊಂದಿಗೆ ಇವನಲ್ಲಿ ಕವಿತಾಶಕ್ತಿಯೂ ಉಂಟಾಗಿ ಕ್ರಮೇಣ ಪಂಡಿತನೆಂದೂ ಕವಿಯೆಂದೂ ಪ್ರಸಿದ್ಧಿಗೆ ಬಂದನು. ಆ ಸಂದರ್ಭಕ್ಕೆ ತಕ್ಕಂತೆ ಭಾಗ್ಯ ವಶಾತ್ ಇವನಿಗೆ ಸಾಮಂತರಾಜರಲ್ಲಿಯೂ ಮಂಡಲೇಶ್ವರರಲ್ಲಿಯೂ ರಾಜಾಶ್ರಯವು ಸಿಕ್ಕಿ ಕ್ರಮಶಃ ಖ್ಯಾತಿಗೆ ಬಂದನು. ಪ್ರಾಯಶಃ ಆ ಕಾಲದ "ಚಕ್ರೇಶ್ವರಮಂಡಲೇಶ್ವರ"ನು ಇವನ ಯೋಗ್ಯತೆಯನ್ನು ಮೊದಲು ಕಂಡುಹಿಡಿದು ಇವನಿಗೆ ಪ್ರಥಮ ಸನ್ಮಾನವನ್ನು ಕೊಟ್ಟಿದ್ದಿರಬೇಕು. ಅಜಿತಪುರಾಣದ (೧೨–೪೩)

"ಬೆಳುಗುರೆ ನಾಡೊಳ್ ಪುಟ್ಟಿದ । ಬಳೆಗಾಜಿರ ಕುಲದೊಳೆಜೆದ ಜಿನ
ಶಾಸನಮಂ ॥

ಬೆಳಗುವ **ಚಕ್ರೇಶ್ವರಮಂ । ಡಳೇಶ್ವರಂ ಬೆಸಸೆ ನೆಗಟ್ದ*ಕವಿ**
ಕವಿರತ್ನಂ" ॥

ಎಂಬ ಪದ್ಯವು ಈ ಊಹೆಯನ್ನು ಸಮರ್ಥಿಸುತ್ತದೆ. ಅದಲ್ಲದೆ,
"ಮೊದಲೊಳ್ ಸಾಮಂತರಿಸಿಸಿ । ಸುದಿತೋದಿತನಾಗಿ ಮಂಡಲೇಶ್ವರಸಿಂದ ॥
ಭ್ಯುದಯಪರನೆನಿಸಿ ಚಕ್ರಿಯಿ । ನುದಯಪರಂಪರೆಯನೆಯ್ದಿದಂ
ಕವಿರತ್ನಂ ॥ (ಗದಾ. ೧-೩೪)

ಎಂಬುದರಿಂದ ಇವನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ರಾಜಾಸ್ಥಾನಗಳಲ್ಲಿದ್ದು ಕ್ರಮಶಃ ಅಭ್ಯುದಯವನ್ನೈದುತ್ತ ಬಂದನೆಂಬುದೂ ಸ್ಪಷ್ಟವಾಗುವುದು. ಆ ಕಾಲದಲ್ಲಿಯ ಗಂಗಕುಲದ ರಾಜರಲ್ಲಿ ಪ್ರಸಿದ್ಧ ಮಂತ್ರಿಯೂ ಮಹಾವೀರನೂ ಕವಿಯೂ ಆಗಿದ್ದ, ಶ್ರಾವಣ ಬೆಳ್ಗೊಳದ ಗೋಮಟೇಶ್ವರ ವಿಗ್ರಹದ ಪ್ರತಿಷ್ಠಾಪಕನಾದ, ಚಾವುಂಡರಾಯನು ಇವನಿಗೆ ಆಶ್ರಯವನ್ನು ಕೊಟ್ಟು ಪೋಷಿಸಿ, ಇವನನ್ನು ಉನ್ನತಿಗೆ ತಂದನು. ಚಾವುಂಡರಾಯನ ಆಶ್ರಯದಲ್ಲಿ ಪ್ರಸಿದ್ಧಿಗೆ ಬರುತ್ತಿದ್ದ ಕಾಲದಲ್ಲಿಯೇ ಇವನಿಗೆ ಜೈನಗುರುಗಳಾದ ಅಜಿತಸೇನಭಟ್ಟಾರಕರ ಸಮಾಗಮವುಂಟಾಗಿ, ಅವರ ಪಾದವನ್ನು ಹಿಡಿದು ಇವನು ಜೈನಮತಗ್ರಂಥಗಳ ಜ್ಞಾನವನ್ನೂ ಆರ್ಜಿಸಿಕೊಂಡನು. ಬಳಿಕ ತನ್ನ ತಾಯ್ನಾಡಾದ ಮುದುವೊಳಲಿಗೆ ಹಿಂತಿರುಗಿದನೆಂದು ತೋರುತ್ತದೆ. ಅಷ್ಟು ಹೊತ್ತಿಗೆ ಕರ್ಣಾಟಕದ ರಾಜಕೀಯರಂಗದಲ್ಲಿ ಹಲವು ಮಾರ್ಪಾಡುಗಳು ಆಗಿಹೋಗಿದ್ದುವು. ಅಷ್ಟರ ತನಕ ಕರ್ಣಾಟಕದ ಅಧಿರಾಜರಾಗಿದ್ದ ರಾಷ್ಟ್ರಕೂಟರ ಸ್ಥಾನವನ್ನು ಪಡುವಣ ಚಾಳುಕ್ಯರು ಆಕ್ರಮಿಸಿದ್ದರು. ಕ್ರಿ. ಶ. 973ರಲ್ಲಿ ಚಾಳುಕ್ಯರಾಜನಾದ ಆಹವಮಲ್ಲ ನೂರ್ಮಡಿ ತೈಲಪನು ರಾಷ್ಟ್ರಕೂಟಚಕ್ರವರ್ತಿಯಾದ ಕಕ್ಕನನ್ನು ಸೋಲಿಸಿ ಕರ್ಣಾಟಕಸಿಂಹಾಸನವನ್ನಾಕ್ರಮಿಸಿಕೊಂಡು ತಾನೇ ಚಕ್ರವರ್ತಿಯೆನಿಸಿ ಆಳತೊಡಗಿದನು. ಈ ಆಹವಮಲ್ಲತೈಲಪನ ಮಗನೇ, "ಸಾಹಸ ಭೀಮ ವಿಜಯ" ಕಾವ್ಯದ ಕಥಾನಾಯಕನಾದ ಸಾಹಸಭೀಮನೆಂದನೆ ಹೊಗಳಿಸಿ ಹೇಳಲ್ಪಟ್ಟ ಸತ್ಯಾಶ್ರಯ ಇಱಿವಬೆಡಂಗನು. ಇಷ್ಟು

ಕಾಲದ ವರೆಗೆ ಗಂಗರಾಜರ ಮಂತ್ರಿಯಾದ ಚಾವುಂಡರಾಯನ ಪೋಷಣೆಯಲ್ಲಿದ್ದು ಕವಿಯೆಂದೂ ಪಂಡಿತನೆಂದೂ ಪ್ರಸಿದ್ಧಿಗೆ ಬಂದಿದ್ದ ಈ ಕವಿರತ್ನನು ತನ್ನ ಹುಟ್ಟೂರಿಗೆ ಬಂದ ಬಳಿಕ ಚಾಳುಕ್ಯ ಚಕ್ರವರ್ತಿಯಾದ ತೈಲಪನ ಆಶ್ರಯವನ್ನು ಸಂಪಾದಿಸಿಕೊಂಡು ಆ ಚಕ್ರವರ್ತಿಯಿಂದ ವಿಶೇಷ ಪುರಸ್ಕೃತನಾಗಿ, ಮಹಿಮೋನ್ನತಿಯನ್ನೂ ಕವಿಚಕ್ರವರ್ತಿಯೆಂಬ ಬಿರುದನ್ನೂ ಆ ಬಿರುದಿಗೆ ತಕ್ಕಂತಿರುವ "ಮದನಾವತಾರಮುಂ ಕನಕದಂಡಚಾಮರಮುಂ ಉನ್ಮತ್ತಮದೇಭಮುಂ ಉತ್ತುಂಗದ ಛತ್ರಗಾವೆಯು[ನ್ನೂ] ಪಡೆದು ಉದಾತ್ತ ಕವಿತಿಲಕನೆನಿಸಿ" ಉದಯಪರಂಪರೆಯನ್ನೆಯ್ದಿದನು. ಇವನಿಗೆ ಅಭಿನವ ಕವಿಚಕ್ರವರ್ತಿ ಎಂಬ ಬಿರುದೂ ಅಲ್ಲದೆ ಅಜಿತ ಪುರಾಣ (೧-೪೦ನೆ ಪದ್ಯ)ದಲ್ಲಿ ಹೇಳಿದಂತೆ—

> "ಕವಿಮುಖಚಂದ್ರಂ ಕವಿಚ । ಕ್ರವರ್ತಿ ಕವಿರಾಜಶೇಖರಂ ಕವಿ
> ರಾಜಂ ॥
> ಕವಿಜನಚೂಡಾರತ್ನಂ । ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ" ॥

ಎಂಬ ಬಿರುದುಗಳೂ ಇದ್ದುವೆಂದು ತೋರುತ್ತದೆ. ಇವನಿಗೆ ಶಾಂತಿ-ಜಕ್ಕಿ ಎಂಬಿಬ್ಬರು ಹೆಂಡಿರೂ, ರಾಯನೆಂಬ ಮಗನೂ, ಅತ್ತಿಮಬ್ಬೆಯೆಂಬ ಮಗಳೂ ಇದ್ದರು. ತೈಲಪ ಚಕ್ರವರ್ತಿಯ ರಾಜಧಾನಿಯಲ್ಲಿ 'ಚಕ್ರವರ್ತಿ ಪೂಜಿತೆ'ಯೆಂಬ ಪ್ರಶಂಸೆಗೆ ಪಾತ್ರಳಾಗಿದ್ದ, ಆ ಕಾಲದ ಜೈನಧರ್ಮಾನುಯಾಯಿಗಳಲ್ಲಿ ಜೈನಧರ್ಮಪ್ರಸಾರಕ್ಕೆ ಆಧಾರನಿಲಯೆಯಾಗಿ ದಾನಚಿಂತಾಮಣಿಯೆಂದು ಖ್ಯಾತಿಗೊಂಡಿದ್ದ ಅತ್ತಿಮಬ್ಬೆಯೆಂಬಾಕೆ ಕವಿರನ್ನನಿಗೆ ಪೋಷಕಳಾಗಿ ನಿಂತು ಬಹುಮಾನಿಸಿ ಇವನಿಂದ 'ಅಜಿತತೀರ್ಥಕರಪುರಾಣತಿಲಕ'ವನ್ನು ಬರೆಯಿಸಿದಳು. ಬಳಿಕ ಚಾಳುಕ್ಯಚಕ್ರವರ್ತಿಯೂ ಪಂಡಿತಾಶ್ರಯನೂ ತನ್ನ ದೊರೆಯೂ ಆದ ಸತ್ಯಾಶ್ರಯ ಇರಿವಬೆಡಂಗನ ಸಾಹಸಕೃತ್ಯಗಳಿಗೆ ಮೆಚ್ಚಿ ಆತನ ಕೀರ್ತಿಯನ್ನು ಶಾಶ್ವತಗೊಳಿಸುವ ಉದ್ದೇಶದಿಂದ ಆತನನ್ನು ಭೀಮನೊಡನೆ ಹೋಲಿಸಿ ಉತ್ತಮ ಕಾವ್ಯರತ್ನವಾದ ಈ ಸಾಹಸಭೀಮವಿಜಯವನ್ನು ರಚಿಸಿ ಕವಿರನ್ನನು ಕೃತಕೃತ್ಯನಾದನು. ಇವನು ಸುಮಾರು ಕ್ರಿ. ಶ. 1020ರಲ್ಲಿ ಮೃತನಾಗಿರಬಹುದು ಎಂದು ಊಹಿಸಲಾಗಿದೆ.

**ಕವಿರನ್ನನ ಕೃತಿಗಳು:**—ರನ್ನನು ಅಜಿತಪುರಾಣದಲ್ಲಿ (೧೨-೪೨) “ಕರಮೆಸೆದುವು ರತ್ನತ್ರಯ। ಪರಿಕಲ್ಪದೆ **ಪರಶುರಾಮಚರಿತಂ ಚಕ್ರೇ-॥ ಶ್ವರಚರಿತಮಜಿತತೀರ್ಥೇಶ- । ಶ್ವರಚರಿತಂ** ರತ್ನನಿಂದೆ ಭುವನತ್ರಯದೊಳ್” ॥ ಎಂದು ಹೇಳಿಕೊಂಡಿರುವುದರಿಂದ, ರನ್ನನು ಪರಶುರಾಮ ಚರಿತಂ ಚಕ್ರೇಶ್ವರ ಚರಿತಂ ಮತ್ತು ಅಜಿತತೀರ್ಥೇಶ್ವರಚರಿತಂ ಎಂಬ ಮೂರು ಶ್ರೇಷ್ಠಕೃತಿಗಳನ್ನು ರಚಿಸಿದ್ದಂತೆ ತಿಳಿದುಬರುವುದು. ಇವುಗಳಲ್ಲಿ ಪರಶು ರಾಮಚರಿತವೂ ಚಕ್ರೇಶ್ವರಚರಿತವೂ ಈ ವರೆಗೆ ಸಿಕ್ಕಿರುವುದಿಲ್ಲ. ಅಜಿತತೀ ರ್ಥೇಶ್ವರ ಚರಿತಂ ಎಂಬುದೇ ಈಗ ಉಪಲಬ್ಧವಿರುವ ‘ಅಜಿತತೀರ್ಥಕರ ಪುರಾಣ ತಿಲಕ’ವು. ಇದನ್ನು ದಾನಚಿಂತಾಮಣಿಯಾದ ಅತ್ತಿಮಬ್ಬೆಯು ಅಭಿನವ ಕವಿಚಕ್ರವರ್ತಿಯಾದ ತನ್ನಿಂದ ಮಾಡಿಸಿದಳು ಎಂದು ಆ ಕಾವ್ಯದ ಆಶ್ವಾಸಾಂತ್ಯಗದ್ಯದಲ್ಲಿ ಹೇಳಿದ್ದಾನೆ. ಪರಶುರಾಮಚರಿತವು ಈಗ ಸಿಕ್ಕ ದಿದ್ದರೂ ಅದು ಸಂಸ್ಕೃತದಲ್ಲಿದ್ದಿರಬಹುದೆಂದೂ, ಸಮರಪರಶುರಾಮ ನೆಂಬ ಬಿರುದನ್ನುಳ್ಳ,(ರನ್ನನ ಪೋಷಕನಾದ) ಚಾವುಂಡರಾಯನ ಪ್ರಶ ಸ್ತಿಗಾಗಿ ಬರೆದುದಾಗಿದ್ದಿರಬಹುದೆಂದೂ ಕೆಲವು ವಿದ್ವಾಂಸರ ಊಹೆಯಿದೆ; ಹಾಗೆಯೇ ಚಕ್ರೇಶ್ವರಚರಿತವು ಈ ಗದಾಯುದ್ಧವೇ ಆಗಿರಬಹುದೆಂದೂ ಇಲ್ಲವೆ ಭರತಚಕ್ರೇಶ್ವರನ ಚರಿತವನ್ನು ಕುರಿತ ಕಾವ್ಯವಾಗಿರಬಹುದೆಂದೂ ಊಹೆಗಳಿದ್ದಿವೆ. ಆದರೆ ಇವೆಲ್ಲ ಕೇವಲ ಊಹೆಗಳು ಮಾತ್ರ. ಅಜಿತ ತೀರ್ಥಕರಪುರಾಣತಿಲಕದಲ್ಲಿ ಜೈನರ ಎರಡನೆಯ ತೀರ್ಥಂಕರನಾದ ಅಜಿ ತನ ಭವಾವಳಿಯೂ ಪಂಚಕಲ್ಯಾಣರೂಪಜೀವನಚರಿತೆಯೂ, ಅದಕ್ಕೆ ಅನುಬಂಧವಾಗಿ ಸಗರಚಕ್ರವರ್ತಿಯ ಕಥೆಯೂ ವರ್ಣಿಸಲ್ಪಟ್ಟು, ಆ ಕೃತಿ ಯು “ಪುರಾಣತಿಲಕ”ವೆಂಬಂತೆ ರಚಿಸಲ್ಪಟ್ಟಿದೆ. ಇದು ಶಕ. 915 (ಕ್ರಿ. ಶ. 993)ನೆಯ ವಿಜಯ ಸಂವತ್ಸರದ ಕಾರ್ತಿಕ ಸೋಮವಾರದಂದು ತನ್ನಿಂದ ಪ್ರಕಟವಾಯಿತೆಂದು ರನ್ನನು ಇದರ ಕೊನೆಯ ಪದ್ಯದಲ್ಲಿ ಹೇಳಿ ದ್ದಾನೆ. ರನ್ನನು ಪರಶುರಾಮಚರಿತವನ್ನು ತನ್ನ ಮಗನಾದ ರಾಯನ ಹೆಸರಿಗೂ ಚಕ್ರೇಶ್ವರಚರಿತವನ್ನು ತನ್ನ ಮಗಳಾದ ಅತ್ತಿಮಬ್ಬೆಯ ಹೆಸ ರಿಗೂ ಅಂಕಿತಮಾಡಿ ಬರೆದಿದ್ದಿರಬಹುದೆಂದು ರಾಮಾನುಜಯ್ಯಂಗಾ ರ್ಯರ ಮುದ್ರಿತ ಪುಸ್ತಕದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

**ಸಾಹಸಭೀಮವಿಜಯಂ** (ಗದಾಯುದ್ಧಂ)— ಇದು ರನ್ನನ ಕೃತಿರತ್ನವು. ಇದರ ಪ್ರತಿಯೊಂದು ಆಶ್ವಾಸಾಂತ್ಯದ ಗದ್ಯದಲ್ಲಿ "ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್" ಎಂದು ಹೇಳಿರುವುದರಿಂದ ಇದಕ್ಕೆ ಸಾಹಸಭೀಮವಿಜಯವೆಂದೇ ಹೆಸರಿದ್ದರೂ, ಇದನ್ನು ರನ್ನನ ಗದಾಯುದ್ಧವೆಂದು ಕರೆವ ವಾಡಿಕೆಯುಂಟಾಗಿದೆ. "ಪೇೞ್ದನೀ ಗದಾಯುದ್ಧಮಂ ಕವಿರನ್ನಂ" ಮತ್ತು "ವಸ್ತು ಯುದ್ಧಮೆನಿಸಿಲ್ ಪೇೞ್ದಂ ಗದಾಯುದ್ಧಮಂ" ಎಂಬ, ಗದಾಯುದ್ಧದಲ್ಲಿಯ ಮಾತುಗಳು ಇದಕ್ಕೆ ಸಮರ್ಥಕಗಳಾಗಿವೆ. ಇದರಲ್ಲಿಯ ಮುಖ್ಯ ಕಥಾವಸ್ತುವು ಭೀಮದುರ್ಯೋಧನರ ಗದಾಯುದ್ಧವೇ ಆಗಿದ್ದರೂ, "ಒಳಪೊಕ್ಕು ನೋಡೆ ಭಾರತದೊಳಗಣ ಕಥೆಯೆಲ್ಲಂ ಈ ಗದಾಯುದ್ಧದೊಳ್ ಅಂತು ಒಳಕೊಂಡತ್ತೆನೆ ಸಿಂಹಾವಲೋಕನಕ್ರಮದಿಂದ" ಹೇಳಿ ಸಮಸ್ತಭಾರತಕಥೆಯ ಮುಖ್ಯಾಂಶಗಳನ್ನು ರನ್ನನು ಸಂಗ್ರಹವಾಗಿ ಪಾತ್ರಗಳ ಬಾಯಿಂದ ಅಲ್ಲಲ್ಲಿ ಹೇಳಿಸಿದ್ದಾನೆ. ಈ ಕಾವ್ಯಕ್ಕೆ ಮಹಾಭಾರತದಲ್ಲಿಯ ಮೂಲಕಥೆಯೇ ಆಧಾರವಾಗಿದ್ದರೂ, ಅಲ್ಲಿಯ ಕಥಾಭಾಗಕ್ಕೂ, ಇದರಲ್ಲಿಯ ಕಥಾಸಂವಿಧಾನಕ್ಕೂ ಹಲವು ವ್ಯತ್ಯಾಸಗಳಿವೆ. ರನ್ನನು ಈ ಕಾವ್ಯದ ಕಥಾಸಂವಿಧಾನದಲ್ಲಿ ಪಂಪನ ವಿಕ್ರಮಾರ್ಜುನವಿಜಯದ ಹದಿಮೂರನೆಯ ಮತ್ತು ಹದಿನಾಲ್ಕನೆಯ ಆಶ್ವಾಸಗಳ ಕಥಾಸಂವಿಧಾನವನ್ನೇ ಅವಲಂಬಿಸಿ, ಕೆಲವೆಡೆಗಳಲ್ಲಿ ಸಂಸ್ಕೃತವೇಣೀಸಂಹಾರ ನಾಟಕದ ಭಾವಗಳನ್ನೂ ಯಥೋಚಿತವಾಗಿ ಮಾರ್ಪಡಿಸಿಕೊಂಡು ಪ್ರತಿಭಾವಿಶೇಷದಿಂದ ತನ್ನವೇ ಆದ ಹೊಸ ಕಳೆಯನ್ನು ಕೊಟ್ಟು ಉತ್ಕೃಷ್ಟವಾದ ರೀತಿಯಲ್ಲಿ ಕಾವ್ಯರಚನೆಮಾಡಿದ್ದಾನೆ. ತೋರಮಟ್ಟಿಗೆ ಇದು ಪಂಪನ ವಿಕ್ರಮಾರ್ಜುನವಿಜಯದ ಪಡಿನೆಳಲಂತಿದ್ದರೂ, ಪಂಪನು ಸಂಕ್ಷಿಪ್ತವಾಗಿ ಸೂಚಿಸಿದ್ದ ಭಾಗಗಳನ್ನು ಚಮತ್ಕಾರವಾಗಿ ವಿಸ್ತರಿಸಿಯೂ, ವರ್ಣನಾಭಾಗಗಳಲ್ಲಿ ವಿಶೇಷಗ್ರಥನಕೌಶಲವನ್ನು ತೋರಿಸಿಯೂ, ವೀರೋಚಿತವಾದ ಶೈಲಿಯಲ್ಲಿ ಪದರಚನೆಮಾಡಿಯೂ, ಪಾತ್ರರಚನೆಯಲ್ಲಿ ವಿಶೇಷನೈಪುಣ್ಯವನ್ನು ತೋರಿಸಿಯೂ ಇದಕ್ಕೆ ಹೊಸಮೆರುಗನ್ನು ಕೊಟ್ಟಿದ್ದಾನೆ. ರನ್ನನು

ಇದರಲ್ಲಿ ಪಂಪನ ಹೆಸರನ್ನು ಕೂಡ ಸೂಚಿಸದಿರುವುದು ಸೋಜಿಗದ ಸಂಗತಿ. ಆದರೂ, ತನ್ನ ಅಜಿತಪುರಾಣದಲ್ಲಿ ಪಂಪನನ್ನು ಹೊಗಳಿದ್ದಾನೆಂಬುದು ಸಮಾಧಾನಕರವು.

ಈ ಸಾಹಸಭೀಮವಿಜಯಕಾವ್ಯಕ್ಕೆ ಭೀಮನೇ ಕಥಾನಾಯಕನು. "ಭೀಮಂ ಜಯೋದ್ದಾಮಂ" ಎಂದು ಕವಿಯೇ ಹೇಳಿದ್ದಾನೆ. ಭೀಮನು ನಿಜವಾಗಿಯೂ ಸಾಹಸಭೀಮನೇ. ವೀರೋಚಿತಪ್ರತಿಜ್ಞೆಯನ್ನು, ಅವನ್ನು ನೆರವೇರಿಸಿ 'ಸಿದ್ಧಸಾಧ್ಯ'ನಾದವನು. ಧೀರೋದಾತ್ತ ನಾಯಕನಲ್ಲಿರುವ ಗುಣಗಳು ಅವನಲ್ಲಿವೆ. ಇವನ ಪ್ರತಿನಾಯಕನಾದ ದುರ್ಯೋಧನನು ಧೀರೋದ್ಧತನೂ ಛಲದಂಕಮಲ್ಲನೂ ಅಭಿಮಾನ ಧನನೂ ಆಗಿದ್ದಾನೆ. ಈ ದುರ್ಯೋಧನನ ಊರುಭಂಗವನ್ನೂ ಮಕುಟ ಭಂಗವನ್ನೂ ಮಾಡಿ (ದ್ರೌಪದಿಯ) ವೇಣೀಸಂಹಾರವನ್ನು ಮಾಡುವೆನೆಂದು ದ್ರೌಪದಿಯ ಮುಂದೆ ಪ್ರತಿಜ್ಞೆಮಾಡಿದ ಸಾಹಸಭೀಮನು ದುರ್ಯೋಧನನೊಡನೆ ಗದಾಯುದ್ಧವನ್ನು ಮಾಡಿ 'ಧರ್ಮಯುದ್ಧದೊಳಂ ತಾತನನಿಕ್ಕಿ' ಕೊಲ್ಲುವನು. ಹೀಗೆ ತನ್ನ ಪ್ರತಿಜ್ಞೆಗಳನ್ನು ಪೂರ್ಣಗೊಳಿಸಿ ಯಥೋಚಿತವಾಗಿ ಪಟ್ಟಾಭಿಷಿಕ್ತನಾಗುವನು. ಇದೇ ಈ ಕಾವ್ಯದಲ್ಲಿಯ ಕಥಾಸಾರವು. ಇದರಲ್ಲಿಯ ವರ್ಣನಾಭಾಗಗಳು ಬೇಸರಹುಟ್ಟಿಸುವಂತಿರದೆ ಹಿತಮಿತವಾಗಿವೆ. ಇದನ್ನು ರನ್ನನು ಕ್ರಿ. ಶ. 982ರಲ್ಲಿ ರಚಿಸಿದನೆಂದು ಕವಿಚರಿತಕಾರರೂ ರಾಮಾನುಜಯ್ಯಂಗಾರ್ಯರೂ ಹೇಳಿದ್ದಾರೆ; ಕ್ರಿ. ಶ. 997-ಕ್ರಿ. ಶ. 1008ರ ಮಧ್ಯಕಾಲದಲ್ಲಾಗಿರಬಹುದೆಂದು ಕೆಲವರ ವಾದ. ಇದು ಇನ್ನೂ ಚರ್ಚಾಸ್ಪದವಾದ ವಿಷಯವಾಗಿಯೇ ಉಳಿದಿದೆ. ಕ್ರಿ. ಶ. 982ರಲ್ಲಿ ಗದಾಯುದ್ಧವು ವಿರಚಿತವಾಯ್ತೆಂಬ ನಿರ್ಧಾರಕ್ಕೆ ಆಧಾರಭೂತವಾದ, ಮೈಸೂರು ಪ್ರತಿಯ ಗ್ರಂಥಾಂತ್ಯದಲ್ಲಿರುವ "ಶಕಸಮಗತಿ. . . ."ಎಂಬ ಪದ್ಯವು ಮದ್ರಾಸುಪ್ರತಿಯಲ್ಲಿ ಇಲ್ಲದಿರುವುದರಿಂದಲೂ ಸತ್ಯಾಶ್ರಯಇಜೀವಬೆಡಂಗನು ಚಕ್ರವರ್ತಿಯಾಗಿ ಪಟ್ಟಾಭಿಷಿಕ್ತನಾದ ಸಂದರ್ಭದಲ್ಲಿ ಈ ಗ್ರಂಥಕ್ಕೆ ಈ ರೂಪ ಬಂದಿರಬಹುದಾದುದರಿಂದಲೂ ಇನ್ನಿತರ ಕಾರಣಗಳಿಂದಲೂ ಇದು ಸುಮಾರು ಕ್ರಿ. ಶ. 997-998ರ ಮಧ್ಯಕಾಲದಲ್ಲಿ ವಿರಚಿತವಾಗಿದ್ದಿರಬಹುದು (ಅಥವಾ

ಮೊದಲೇ ರಚಿತವಾಗಿದ್ದು ಆ ಕಾಲದಲ್ಲಿ ಕೇಶಿದಂತನಾಯಕನಾಗಲಿ ರನ್ನನಾಗಲಿ ಇದನ್ನು ಮತ್ತೊಮ್ಮೆ ಪರಿಷ್ಕರಿಸಿರಬಹುದು) ಎಂದು ನನ್ನ ಅಭಿಪ್ರಾಯವಿದೆ. ಈ ವಿಷಯವನ್ನು ಮುಂದೆ ಮುದ್ರಣವಾಗಲಿರುವ ಈ ಪುಸ್ತಕಕ್ಕಾಗಿಯೇ ಬರೆದ ವಿಸ್ತೃತ ಉಪೋದ್ಘಾತದಲ್ಲಿ ಪ್ರತಿಪಾದಿಸಿರುವೆನು.

ಸಾಹಸಭೀಮವಿಜಯವು ಒಂದು ಶ್ರೇಷ್ಠವಾದ ಚಂಪೂಕಾವ್ಯವು. ಇದರಲ್ಲಿ ಹತ್ತು ಆಶ್ವಾಸಗಳುಂಟು. ಪ್ರಥಮಾಶ್ವಾಸದಲ್ಲಿ ಕವಿಯು ಮಂಗಳಪದ್ಯಗಳಾದ ಬಳಿಕ ಸತ್ಯಾಶ್ರಯ ಇರಿವಬೆಡಂಗನ ಸಾಹಸ ಕೃತ್ಯಗಳನ್ನು ವರ್ಣಿಸಿ, ತನ್ನ ಉದಯಪರಂಪರೆಯನ್ನೆಯ್ದಿದ ಕ್ರಮವನ್ನೂ ತನ್ನ ಕವಿತಾಸಾಮರ್ಥ್ಯವನ್ನೂ ಹೇಳಿಕೊಂಡು, ಸತ್ಯಾಶ್ರಯನನ್ನು ಭೀಮಸೇನನಿಗೆ ಹೋಲಿಸಿ ಕಥೆಯನ್ನು ಆರಂಭಿಸುತ್ತಾನೆ. ಇದರಲ್ಲಿಯ ಕಥಾಂಶವು ಸ್ವಲ್ಪವೇ ಆಗಿದ್ದರೂ ಕಥಾಸಂವಿಧಾನದಲ್ಲಿ ಯಥೋಚಿತವಾಗಿ ಹಿತಮಿತವರ್ಣನೆಗಳನ್ನೂ ಮಾತುಗಳನ್ನೂ ಸೇರಿಸಿ, ಕಾವ್ಯವನ್ನು ಅಚ್ಚುಕಟ್ಟಾಗಿ ಹೊಸಯಿಸಿದ್ದಾನೆ. ಕಥಾರಂಭದಲ್ಲಿ ಭೀಮದ್ರೌಪದಿಯರ ಸಂಭಾಷಣೆ, ರಣರಂಗದಲ್ಲಿ ಸಂಜಯ ದುರ್ಯೋಧನರ ಸಂಭಾಷಣೆ, ದುರ್ಯೋಧನನಿಗೆ ಧೃತರಾಷ್ಟ್ರ ಗಾಂಧಾರಿಯರ ಹಿತೋಪದೇಶ, ದುರ್ಯೋಧನನ ಛಲ, ರಣರಂಗದಲ್ಲಿ ದುರ್ಯೋಧನನ ಪ್ರಲಾಪ, ಭೀಷ್ಮಾವಸಾನವರ್ಣನ, ಭೀಮಸೇನಾಡಂಬರವರ್ಣನ, ಪಾಂಡವರ ಮತ್ತು ದುರ್ಯೋಧನರ ಮೂದಲಿಕೆಯ ಮಾತುಗಳು, ಭೀಮದುರ್ಯೋಧನರ ಗದಾಯುದ್ಧವರ್ಣನ ಮುಂತಾದ ಕಾವ್ಯಭಾಗಗಳು ಬಹುಹೃದಯಂಗಮವಾಗಿಯೂ ರಸವತ್ತಾಗಿಯೂ ಇವೆ. ರನ್ನನ ಮಾತುಗಳಲ್ಲಿ ಎಷ್ಟು ಹುರುಪಿದೆಯೆಂಬುದನ್ನೂ ಎಂತಹ ವೀರಾವೇಶವು ಉಕ್ಕಿ ಹರಿಯುತ್ತಿದೆಯೆಂಬುದನ್ನೂ ಈ ಕಾವ್ಯದಲ್ಲಿ ಸರ್ವತ್ರ ಕಾಣಬಹುದು. ಮಾತ್ರವಲ್ಲದೆ ಇದರಲ್ಲಿ ಸತ್ಯಾಶ್ರಯನ ಶೂರಕೃತ್ಯಗಳನ್ನೂ, ಭೀಮಸೇನನ ವಂಶಾವಳಿಯನ್ನು ಹೇಳಬೇಕಾದ ಸಂದರ್ಭದಲ್ಲಿ ಸತ್ಯಾಶ್ರಯನ ಚಾಳುಕ್ಯವಂಶಾವಳಿಯನ್ನೂ, ಹೇಳಿರುವುದರಿಂದ **ಇದು ಐತಿಹಾಸಿಕದೃಷ್ಟಿಯಿಂದ ಬಹುಮಹತ್ತ್ವವುಳ್ಳ ಕಾವ್ಯವಾಗಿದೆ.** ಇದರಲ್ಲಿ ಕವಿಯು ತನ್ನ ಕವಿತಾಸಾಮರ್ಥ್ಯವೆಲ್ಲವನ್ನೂ ವೆಚ್ಚಮಾಡಿ ವಾಕ್ಪ್ರೌಢಿಮೆಯ ಪರಾಕಾಷ್ಠೆಯನ್ನು ಮೀರಿ

ವಿದ್ದಾನೆ; ಪ್ರಧಾನವಾಗಿ ವೀರರಸವನ್ನು ಬಹುಶ್ಲಾಘ್ಯವಾಗಿ ನಿರೂಪಿಸಿ, ಆನುಷಂಗಿಕವಾಗಿ ಕರುಣರಸವನ್ನೂ ಶೃಂಗಾರರಸವನ್ನೂ ಜೋಡಿಸಿದ್ದಾನೆ. ಶಾಸ್ತ್ರೋಕ್ತವಾದ ನವರಸಗಳಿಗೂ ಶಬ್ದಾರ್ಥಗುಣಗಳಿಗೂ ರೀತ್ಯಲಂಕಾರಗಳಿಗೂ ತಕ್ಕ ಉದಾಹರಣೆಗಳು ಈ ಕಾವ್ಯದಲ್ಲಿ ಸಿಕ್ಕುತ್ತವೆ. ಇದು ಚಂಪೂಗ್ರಂಥವಾಗಿದ್ದರೂ ಇದರಲ್ಲಿಯ ಸನ್ನಿವೇಶಗಳು ನಾಟಕೀಯದೃಶ್ಯಗಳಂತೆ ಸ್ಫುಟವಾಗಿ ಪಾಠಕರ ಕಣ್ಣಮುಂದೆ ಕಟ್ಟುವಂತೆ ರಚಿಸಲ್ಪಟ್ಟಿವೆ. ಮಾತುಗಳು ಉತ್ಸಾಹಪೂರಿತವಾಗಿದ್ದು ಓದುಗರಲ್ಲಿ ತನ್ಮಯತೆಯನ್ನುಂಟುಮಾಡುತ್ತವೆ. ಆದುದರಿಂದ ಇದನ್ನು ಒಂದು '**ಗಂಡುಗವಿತೆ**' ಯೆನ್ನಲು ಅಡ್ಡಿಯಿಲ್ಲ. ಒಟ್ಟಾರೆ, ಕಥಾಸಂವಿಧಾನದಲ್ಲಿಯೂ ಪಾತ್ರರಚನೆಯಲ್ಲಿಯೂ ರಸಪ್ರತಿಪಾದನದಲ್ಲಿಯೂ ಕವಿತಾಚಾತುರಿಯಲ್ಲಿಯೂ ಉತ್ಸಾಹಪೂರಿತವೀರಶೈಲಿಯಲ್ಲಿಯೂ ರನ್ನಕವಿಯು ಈ ಕಾವ್ಯದಲ್ಲಿ ತೋರಿಸಿರುವಷ್ಟು ಕೌಶಲವನ್ನು ಇನ್ನಾವ ಗ್ರಂಥದಲ್ಲಿಯೂ ಏಕತ್ರ ಕಾಣುವುದು ದುರ್ಲಭವು. ಕವಿರನ್ನನ ಹಿರಿಮೆಯನ್ನು ಕುರಿತು ಮತ್ತಿನ ಅನೇಕ ಸತ್ಕವಿಗಳು ತಂತಮ್ಮ ಗ್ರಂಥಗಳಲ್ಲಿ ಸ್ತುತಿಸಿದುದರಿಂದ ಮಾತ್ರವಲ್ಲದೆ, ಲಕ್ಷಣ ಗ್ರಂಥಕಾರರು ಇವನ ಗ್ರಂಥಗಳಿಂದ ಪದ್ಯಗಳನ್ನು ಲಕ್ಷ್ಯವಾಗಿ ಉದಾಹರಿಸಿಯೂ ಇರುವುದರಿಂದ, ಇವನ ಕಾವ್ಯರೀತಿಶೈಲಿಗಳು ನಿರ್ದುಷ್ಟವಾಗಿವೆಯೆಂಬುದು ನಿರ್ವಿವಾದವಾದ ವಿಷಯವು. ಈಯೆಲ್ಲಾ ವಿಷಯಗಳ ಪರಿಜ್ಞಾನವುಂಟಾಗಬೇಕಾದರೆ ಈ ಸಾಹಸಭೀಮವಿಜಯವನ್ನು ಆಮೂಲಾಗ್ರವಾಗಿ ಸಾವಕಾಶವಾಗಿ ಪಠಿಸಿ, ಮನನ ಮಾಡಿಕೊಂಡು, ಕಾವ್ಯರಸವನ್ನು ಆಸ್ವಾದಿಸಿ ನೋಡಬೇಕು.

"ಶ್ರೀಯುತನೊಳುದಾರತೆ ವಾಕ್-।
ಶ್ರೀಯುತನೊಳಮತ್ಸರತ್ವಮಾಗದುದಾರಂ ॥
ಶ್ರೀಯುತನಮತ್ಸರಂ ವಾಕ್-।
ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್" ॥

॥ ಭದ್ರಂ ಶುಭಂ ಮಂಗಳಂ ॥



# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಙ್ಕ್ತಿ | ಅಶುದ್ಧಪಾಠ | ಶುದ್ಧಪಾಠ |
|---|---|---|---|
| ೬ | ೬ | [1]ಪ [ತಿಪ್ಲವಂಗದಿಂ | ಪ [1][ತಿಪ್ಲವಂಗದಿ |
| ೮ | ೧೧ | ಮೆಳ್ಪಡುವಿರೆಂದೊಡಱಿದಂ | ಮೆಟ್ಪಿಡುವಿರೆಂದೊ |
| ೧೦ | ೬ | ನಱುಪಿದಂ | ನಱಿಪಿದಂ |
| ೧೨ | ೮ | ಯಜ್ಞಸೂನುವುಂ | ಯಾಜ್ಞಸೇನಿಯುಂ |
| ೧೨ | ೧೩ | ಧೃತರಾಷ್ಟ್ರರಿದೊರ್ಜಱಿಯೆ | ಧೃತರಾಷ್ಟ್ರರಿದೊರ್ |
| ೨೦ | ೮ | ತಪುವುದುಂ | ತಪ್ಪುವುದುಂ |
| ೨೧ | ೧೯ | ದ್ರೊಣನ | ದ್ರೋಣನ |
| ೨೪ | ೬--೭ | [ಪಟಿದಪ್ರಿಯುಮಂ ಮಾ] | ಪಟಿದಪ್ರಿಯ[ಮ]ಂ |
| ೨೫ | ೮ | ಳಱಿವೆಸದೊಳ್ | ಳಱುವೆಸದೊಳ್ |
| ೩೪ | ೨೧ | ವೃಕಸಳಂ | ವೃಕಸ್ಥಳಂ |
| ೩೭ | ೨೨ | ತಲೆ ಕೊಂದಾ | ತವೆ ಕೊಂದಾ |
| ೩೭ | ೨೩ | ಮು. ಪ್ರೆ. ಪಾ. | ಮ. ಪ್ರ. ಪಾ. |
| ೩೯ | ೧೭ | ಸಮರೋದ್ಯೋಗಂ | ಸಮರೋದ್ಯೋಗಂ |
| ೪೪ | ೧೪ | ಮಡಿದಪ್ರದೆ | ಮಡಿದಪ್ರದೇ |
| ೪೭ | ೨ | [1][ದೆ] | [1][ದೆ][1] |
| ೪೭ | ೩ | ಪಳಯಿಸುತ್ತುಂ | ಪಱಿಯಿಸುತ್ತುಂ |
| ೪೭ | ೫ | ಎಬುದುಂ | ಎಂಬುದುಂ |
| ೪೮ | ೧೯ | ಮಗನೆ | ಮಗನೇ |
| ೫೨ | ೧೮ | ಪರ್ಪಕ್ಷ | ವರ್ಪಕ್ಷ |
| ೬೧ | ೨೨ | ನೋಱ್ಪಿನಂ | ನೋಟ್ಪಿನಂ |
| ೬೪ | ೪ | ಕೆಯ್ಯ್ಯ | ಕಯ್ಯ್ಯ |
| ೬೮ | ೨೧ | ಸೆರೆಯ | ಸೆರೆಯುಂ |
| ೭೬ | ೭ | ತಲೆಯಿಲ್ಲದನಂ | ತಲೆಯಿಲ್ಲದನಾ |

|| ಶ್ರೀರಸ್ತು ||

## "ಸಾಹಸಭೀಮವಿಜಯ"ದ ಶುದ್ಧಾಶುದ್ಧ ಪತ್ರಿಕೆ†

| ಪುಟ | ಪಙ್ಕ್ತಿ | ಅಶುದ್ಧ ಪಾಠ | ಶುದ್ಧ ಪಾಠ |
|---|---|---|---|
| vi | ೩ | ಶ್ರದಾ | ಶ್ರದ್ಧಾ |
| vi | ೯ | ಬೆಳುಗುರೆ | ಬೆಳುಗರೆ |
| vii | ೧ | " | " |
| vii | ೧೨ | ಶ್ರಾವಣ | ಶ್ರವಣ |
| ೩ | ೩–೪ | ನೆಗಬ್ದ\|ರದಱಿಂ | ನೆಗೞ್ದ*\|ದುರ್ದಱಿಂ |
| ೬ | ೬ | [1]ಪ[ತಿಪ್ಲವಂಗದಿಂ | ಪ[1][ತಿಪ್ಲವಂಗಳಿಂ |
| ೮ | ೧೧ | ವೆಳ್ಪಡುವಿರೆಂದೊಱೆದಂ | ಮೆೞ್ಪಡುವಿರೆಂದೊರೆದ |
| ೯ | ೧೪ | ಮಧುರವ್ಯೋ | [2]ಮಧುರವ್ಯೋ–[2] |
| ೯ | ೨೪ನೆ ಪಙ್ಕ್ತಿಯಾಗಿ..................... | | [2]ಮಧುರಂ ವೃ–[2] ಸಂ. ಪ |
| ೧೦ | ೬ | ನಱುಪಿದಂ | ನಱಿಪಿದಂ |
| ೧೧ | ೨೨ | ಜ್ವಾಲೆ | ಜ್ವಾಲಿ |
| ೧೨ | ೮ | ಯಜ್ಞಸೂನುವುಂ | ಯಾಜ್ಞಸೇನಿಯುಂ |
| ೧೨ | ೧೩ | ಧೃತರಾಷ್ಟ್ರರಿದೊರ್ಱೆಯೆ | ಧೃತರಾಷ್ಟ್ರರಿದೊರ್ರೆಯೆ |
| ೧೩ | ೧ | ಕುರರಾಜಾ | ಕುರುರಾಜಾ |
| ೧೮ | ೨೪ | ಸತ್ವಾದಿಗುಣಾಶ್ರಯ | ಸತ್ವಾದಿಗುಣಗಣಾಶ್ರಯ |
| ೧೯ | ೧೮ | ಬೊಂಕಾ | ಬೊಂತಾ |
| ೨೦ | ೮ | ತಪುವುದುಂ | ತಪ್ಪುವುದುಂ |
| ೨೧ | ೧೯ | ದ್ರೊಣನ | ದ್ರೋಣನ |
| ೨೧ | ೨೧ | ಭೌಮ | ಭೂಮಿ |
| ೨೩ | ೬–೭ | [ಪಱಿದ\| ಪ್ರಿಯಮಂ ಮಾ] | ಪಱಿದಪ್ರಿಯ[ಮ]ಂವ |

† ಪುಸ್ತಕದಲ್ಲಿರುವ ಶುದ್ಧಾಶುದ್ಧ ಪತ್ರಿಕೆಗೆ ಪ್ರತಿಯಾಗಿ ಇದನ್ನು ನೋಡಿಕೊಳ್ಳುವು

೨೫ನೆಯ ಪುಟದಲ್ಲಿ ದ್ವಿತೀಯಾಶ್ವಾಸದಲ್ಲಿ ೨೨ನೆ ಪದ್ಯವಾದ ಬಳಿಕ ಕೆಳಗಿನ ಪದ್ಯವನ್ನೂ ಸೇರಿಸಿಕೊಳ್ಳುವುದು:—

[ಗೆಲ್ಲದೊಳೆನ]ಗೊಲವರಮುಂ- |
ಟಲ್ಲೆ[ನ್ನಲ್ ಕೊಳ್ಳದ]ಜ್ಜನುಂ ಮತ್ತೊರ್ವಂ ||
ಬಿಲ್ಲೋಜಂ [ಛಲ]ವಾದಕೆ |
ಬಿಲ್ಲ[ಂ ಬಿಸುಟೆಸಗಿ] ಮೆಚ್ಚಿಕಿಡಿಸಿದರೆಮ್ಮಂ ||*||

ಮೈಸೂರು ಪ್ರತಿಯಲ್ಲಿ ಮಾತ್ರವೇ “ಗೊಲವರಮುಂಟಲ್ಲೆನ್ನೊಳ್ಕಜ್ಜನುಂ ುತ್ತೊರ್ಬಂ ಬಿಲೊಲ್ಲೋಜಂ | ಕೆಳವಾದಿಯ ಬಿಲ್ಲಮಿರ್ದೆಸೆಗೆ ಮೆಚ್ಚಿಕಿಡಿಸಿದ ಮ್ಮಂ”|| ಎಂಬುದಾಗಿರುವ ಈ ಅಬದ್ಧಪದ್ಯವನ್ನು ತಾತ್ಕಾಲಿಕವಾಗಿ ಸಂಪಾದ ರು ಹೀಗೆ ತಿದ್ದಿಕೊಂಡುದು.

| | | | |
|---|---|---|---|
| ೨೫ | ೮ | ಳಱಿವೆಸದೊಳ್ | ಳಱುವೆಸದೊಳ್ |
| ೩೪ | ೨೧ | ವೃಕಸಳಂ | ವೃಕಸ್ಥಳಂ |
| ೩೭ | ೨೨ | ತಲೆಕೊಂದಾ | ತವೆಕೊಂದಾ |
| ೩೭ | ೨೩ | ಮು. ಪ್ರ. ಪಾ. | ಮ. ಪ್ರ. ಪಾ. |
| ೩೯ | ೧೭ | ಸಮರೋದ್ಯೋಗಂ | ಸಮರೋದ್ಯೋಗಂ |
| ೪೪ | ೧೪ | ಮಡಿದಪುದೆ | ಮಡಿದಪುದೇ |
| ೪೭ | ೩ | ಪಳಯಿಸುತ್ತುಂ | ಪಟಿಯಿಸುತ್ತುಂ |
| ೪೭ | ೫ | ಎಬುದುಂ | ಎಂಬುದುಂ |
| ೮ | ೧೯ | ಮಗನೆ | ಮಗನೇ |
| ೯೨ | ೧೮ | ರ್ಪಪಕ್ಷ | ರ್ವಪಕ್ಷ |
| ೬೩ | ೨ | ನೂರ್ವ | ನಾಲ್ವ |
| | | * | |
| ೬೩ | ೮ | ಪುದುನಾಟಿಕ್ವೆಂ | ಪುದುವಾಟಿಕ್ವೆಂ |
| .೧ | ೨೨ | ನೋಟಿಪ್ಪಿನಂ | ನೋಟಪ್ಪಿನಂ |
| .೪ | ೪ | ಕೆಯ್ಯು | ಕಯ್ಯು |
| .೬ | ೧೦ | ಮದಪತ | ಮದಪತ್ಯ |
| ೭ | ೮ | ಕ್ಷತ್ರ | [2]ಕ್ಷತ್ರ[2] |

| | | | |
|---|---|---|---|
| ೬೭ | ೨೧ನೆ ಪಙ್ಕ್ತಿಯಾಗಿ | | ²ಕ್ಷಾತ್ರಂ² — ಸಂ. ಪಾ. |
| ೬೮ | ೨೧ | ಸೆರೆಯ ತೆಗೆವ ಸಿಳ್ಳಾಯ್ಗಳುಮಂ | ಸೆರೆಯಂ ತೆಗೆವ ಸೀಳ್ಳಾಯ್ಗಳುಮಂ |
| ೭೧ | ೬ | ಬಾಳ್ವ | ಬಾೞ್ವ |
| ೭೬ | ೭ | ತಲೆಯಿಲ್ಲದನಂ | ತಲೆಯಿಲ್ಲದನಾ |
| ೭೯ | ೧೪ | ಮವಿಚ್ಛಿನ್ನ | ಮವಿಚ್ಛಿನ್ನ |
| ೮೦ | ೯ | ಪುದುವಾಳ್ದಪೆನೇ | ಪುದುವಾೞ್ದಪೆನೇ |
| ೮೧ | ೪ | ಪುದುವಾಳಲ್ಕಣ | ಪುದುವಾೞಲ್ಕಣ |

೮೭ನೆ ಪುಟದಲ್ಲಿ (ಷಷ್ಠಾಶ್ವಾಸದ) ೧೪ನೆಯ ಪದ್ಯದಿಂದ ಮುಂದಕ್ಕೆ ಆ ಆಶ್ವಾಸದ ಕೊನೆವರೆಗೆ ಪ್ರತಿಯೊಂದು ಪದ್ಯಸಂಖ್ಯೆಗೂ ಒಂದನ್ನು ಕೂಡಿಸಿಕೊಂಡು ತಿದ್ದಿಕೊಳ್ಳುವುದು ]

| | | | |
|---|---|---|---|
| ೮೭ | ೮ | ಸರಮುಂ ಪುಗುವಂತೆ ನಾಗಲೋಕವ ಪೊಕ್ಕಂ | ಸರಮುಂ, ಪುಗುವಂತೆ ನಾಗಲೋಕವ, ಪೊಕ್ಕಂ (“ಸರಮುಂ, ನಾಗಲೋಕವ ಪುಗುವಂತೆ, ಪೊಕ್ಕಂ” — ಎಂದು ಅನ್ವಯವು) **ಅಥವಾ** [“ಸರಮುಂ [ಪೊಕ್ಕಂ,ತೆ! ನಾಗಲೋಕಂಬುಗುವೊಲ್]” ಎಂದಾಗಲಿ, “ಸರಮುಂ [ಪೊಕ್ಕಂ ಸುನಾಗಲೋಕಂಬುಗುವೊಲ್]” ಎಂದಾಗಲಿ ಮೂಲವನ್ನು ತಾತ್ಕಾಲಿಕವಾಗಿ ತಿದ್ದಿಕೊಳ್ಳಬೇಕು. |

| | | | |
|---|---|---|---|
| ೯೦ | ೧೦ | ತದ್ಭುಜ | ತದ್ಭುಜ |
| ೯೧ | ೧೫ | ದಷ್ಟೋಷ್ಟ | ದಷ್ಟೋಷ್ಠ |
| ೧೦೨ | ೨೦ | ಪ್ರೊರೆಮಡು | ಪ್ರೊಜಿಮಡು |
| ೧೧೧ | ೨ | ಮ*ವರ್ಗಂ | ಮವ*ರ್ಗಂ |
| ೧೧೮ | ೧೨ | ಮಳ್ಕಿಸ | ಮಟ್ಕಿಸ |
| ೧೨೪ | ೫ | ಮುಳಿದರನಿಕ್ಕುವೆನೆಂದು | ಮುಳಿದರನಿಕ್ಕುವೆವೆಂದು |
| ೧೨೫ | ೧೭ | ಸಾಸಿದ | ಸೂಸಿದ |
| ೧೨೭ | ೨೧ | ಪೂಣಂದಿನ | ಪೂಣ್ದಂದಿನ |
| ೧೨೮ | ೨೪ | [1] ಯುಂ ಪಱಿಭವಿಸಿದನೆಂದಂ [1] | [1] ಪಱಿಭವಿಸಿದನೆಂದಂ [1] |
| ೧೨೯ | ೧೨ | ಶುಭವಚನರ್ | ಶುಭವದನರ್ |
| ೧೩೨ | ೧೩ | ದ್ರುಪದಜಾ | ದ್ರು*ಪದಜಾ |
| ೧೪೦ | ೧೨ | ಕುಡುಪಿಂದೆ | ಕಡುಪಿಂದೆ |
| ೧೪೦ | ೨೧ | ಕಾ[ಪಱಿದು] | [ಕಾಪಟಿದು] |
| ೧೪೧ | ೧೫ | ಕಡೆದುದು | ಕೆಡೆದುದು |
| ೧೪೫ | ೭ | ಪಶ್ಚಾತ್ತಾಪಂಬಟ್ಟಾ | ಪಶ್ಚಾತ್ತಾಪಂಗೆಯ್ದಾ |
| ೧೪೬ | ೨೭ | ಭರಂಗೆಯೊಡಾ | ಭರಂಗೆಯ್ದೊಡಾ |
| ೧೫೦ | ೧೨ | ಕ್ಕುಳ | ತ್ಕುಳ |
| ೧೫೩ | ೨೩ | ಮೆಯೆ | ಮೆಯ್ದೆ |
| ೧೫೫ | ೫ | ಪಾಂಡನಂದನರ್ಗೆ | ಪಾಂಡುನಂದನರ್ಗೆ |

ಶ್ರೀನಿವಾಸ ಪ್ರಿಂಟಿಂಗ್ ವರ್ಕ್ಸ್, ರಥಬೀದಿ, ಮಂಗಳೂರು

| | | | |
|---|---|---|---|
| ೨೯ | ೧೪ | ಮವಿಚ್ಛಿನ್ನೆ | ಮೆವಿಚ್ಛಿನ್ನೆ |
| ೮೦ | ೯ | ಪ್ರದುವಾಳ್ವಪೆನೆ: | ಪ್ರದುವಾಬ್ಬಿಪೆನೆ: |
| ೮೧ | ೪ | ಪ್ರದುವಾಳಲ್ಕೃಣ | ಪ್ರದುವಾಬಲ್ಕೃಣ |

**ಸೂಚನೆ:**— ಷಷ್ಠಾಶ್ವಾಸದ (ಪುಟ ೮೭) ೧೪ನೆಯ ಪದ್ಯದಿಂದ ಮುಂದಕ್ಕೆ ಆ ಆಶ್ವಾಸದ ಕೊನೆವರೆಗೆ ಪ್ರತಿಯೊಂದು ಪದ್ಯದ ಸಂಖ್ಯೆಗೂ ಒಂದನ್ನು ಕೂಡಿಸಿಕೊಂಡು ತಿದ್ದಿಕೊಳ್ಳುವುದು.

| | | | |
|---|---|---|---|
| ೧೦೩ | ೨೦ | ಪ್ರೊರಿಮಡು | ಪ್ರೌಢಿಮಡು |
| ೧೧೧ | ೨ | ಮುವ*ರ್ಗಂ | ಮೆವರ್ಗ*ಂ |
| ೧೨೪ | ೫ | ಮುಳಿದರಸಿಕ್ಕ್ಯವೆನೆಂದು | ಮುಳಿದರಸಿಕ್ಕ್ಯವೆನೆಂದು |
| ೧೨೭ | ೨೧ | ಪೂಣಂದಿನ | ಪೂಣ್ದಂದಿನ |
| ೧೨೮ | ೨೪ | ।ಯುಂಪರಿಭವಿಸಿದನೆಂದಂ। | ।ಪರಿಭವಿಸಿದನೆಂದಂ। |
| ೧೪೭ | ೨೭ | ಭರಂಗೆಯೊಡಾ | ಭರಂಗೆಯ್ದೊಡಾ |
| ೧೫೦ | ೧೨ | ಕ್ಕ್ಕಳ | ತ್ಕ್ಕಳ |



# ಈ ಪುಸ್ತಕದಲ್ಲಿ ಉಪಯೋಗಿಸಿದ ಸಂಕೇತಗಳ ವಿವರಣೆ.

ಮು. ಪು. ಪಾ. — ಮುದ್ರಿತ ಪುಸ್ತಕದ ಪಾಠ ಅಥವಾ ಪಾಠಾಂತರವು (ಮುದ್ರಿತ ಪುಸ್ತಕವೆಂದರೆ ೧೯೨೫ರಲ್ಲಿ ಮೈಸೂರಿ ಪಂ. ಅ. ರಾಮಾನುಜಯ್ಯಂಗಾರ್ಯ ಇವರು ಸಂಪಾ ದಿಸಿ ಪ್ರಕಟಿಸಿದ ಗದಾಯುದ್ಧದ ಪರಿಷ್ಕೃತ ತೃತೀಯ ಮುದ್ರಣ).

ಮ. ಪ್ರ. ಪಾ. — ಮದ್ರಾಸು ಪ್ರತಿಯ ಪಾಠ ಅಥವಾ ಪಾಠಾಂತರವು (ಮದ್ರಾಸು ಓರಿಯೆಂಟಲ್ ಲೈಬ್ರರಿಯಲ್ಲಿರು ಓಲೆಗರಿಯ ಮೂಲ ಮಾತೃಕೆಯನ್ನು ಪ್ರಸರುಜ್ಜೀ ತಗೊಳಿಸಿ ಪ್ರತಿಮಾಡಿದುದರ ಯಥಾಪ್ರತಿ)

ಮೈ. ಪ್ರ. ಪಾ. — ಮೈಸೂರುಪ್ರತಿಯ ಪಾಠ ಅಥವಾ ಪಾಠಾಂತರವು (ಮೈಸೂರಿನ ಓರಿಯೆಂಟಲ್ ಇನ್‌ಸ್ಟಿಟ್ಯೂಟಿನಲ್ಲಿರು ಗದಾಯುದ್ಧಕಾವ್ಯದ ಕೈಬರೆಹದ ಕಾಗದದ ಪ್ರತಿಯ ಯಥಾಪ್ರತಿ).

ಹೋ. ನೋ. — ಹೋಲಿಸಿ ನೋಡಿರಿ.

ಪಂ. ಭಾ. — ಪಂಪಭಾರತಂ (ಪಂಪನ ವಿಕ್ರಮಾರ್ಜುನ ವಿಜಯಂ)

ಅ. ಪು. — ಅಜಿತಪುರಾಣಂ (ರನ್ನನ ಅಜಿತತೀರ್ಥಕರಪುರಾಣ ತಿಲಕಂ)

ಸಂ. ಪಾ. — ಸಂಪಾದಕರ ಪಾಠ ಅಥವಾ ಪಾಠಾಂತರವು. (ಈ ಪುಸ್ತಕದ ಸಂಪಾದಕರು ಯಥಾಮತಿ ಊಹಿಸಿ ತಿದ್ದಿಕೊಂಡ ಪಾಠವು).

ಸ್ವೀ. ಪಾ. — ಸ್ವೀಕೃತ ಪಾಠವು.



॥ ಶ್ರೀರಸ್ತು ॥

## ಕವಿಚಕ್ರವರ್ತಿಕವಿರನ್ನವಿರಚಿತಂ

# ಸಾಹಸಭೀಮವಿಜಯಂ

# (ಗದಾಯುದ್ಧಂ)

## ಪ್ರಥಮಾಶ್ವಾಸಂ

ಶ್ರೀಯುವತೀಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿದೈ- ।
ತೇಯನನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರನ- ॥
ಬ್ಜಾಯತನೇತ್ರನಾದಿಪುರುಷಂ ಪುರುಷೋತ್ತಮನೀಚಳುಕ್ಯನಾ- ।
ರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ ॥ ೧ ॥

ತರುಣೋತ್ತುಂಗಶಶಾಂಕಖಂಡಮೆ ಸುಧಾಬೀಜಂ ಭುಜಂಗೇಂದ್ರನಂ- ।
ಕುರಮುನ್ಮೀಲಿತಮಟ್ಟಹಾಸಮೆ ದಳಾನೀಕಂ ವೃಷಂ ಪುಷ್ಪವಿಾ- ॥
ಸ್ತರಶೈಲಂ ಫಲಮಾಗೆ ಕೋಮಲಮುಖೀಗೌರೀಲತಾಶ್ಲಿಷ್ಟಶಂ- ।
ಕರಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ ॥ ೨ ॥

ವರಪದ್ಮಾಸನದೊಳ್ ಕನನ್ಮಣಿಮಯಂ ಸಿಂಹಾಸನಂ ಬ್ರಾಹ್ಮಿಯೊಳ್ ।
ಪರಮಶ್ರೀ ಗಣನಾಕ್ಷಸೂತ್ರಮಣಿಯೊಳ್ ರತ್ನೋಜ್ಜ್ವಲಂ ಭೂಷಣಂ ॥
ದೊರೆಯಾಗಿರ್ಪನಮೊಂದುಗುಂದದಖಿಲಂ ವಿಜ್ಞಾನದಿಂದಂ ಜಗ- ॥
ದ್ಗುರುವಾದಂ ನಮಗೀಗೆ ಬೇಟ್ಪ ವರಮಂ ಶ್ರೀರಾಜಕಂಜಾಸನಂ ॥ ೩ ॥

ಬಲವದ್ವೈರಿತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶಸ ।
ಲ್ಲಲಿತಂಗಳ್ ಜಿತಚಕ್ರವಾಕನಿವಹಪ್ರೇಮಾವಹಂಗಳ್ ಮಹೀ ॥
ವಲಯೋದ್ದ್ಯೋತಕರಂಗಳಾನತಜನಕ್ಕಾನಂದಮಂ ಮಾೞ್ಕೆ ಮಂ
ಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ ॥ ೪

ಕೂರಿಸಿ [1]ವೀರ[1]ಶ್ರೀಯಂ ।
ಕೂರದರಂ ಕೊಂದು ಸಮರಜಯಮಂ ಮಾಡಲ್ ॥
ಕೂರಸಿಯೊಳ್ ನೆಲಸುಗೆ ಕಂ-।
ಠೀರವವಾಹನೆ ಚಳುಕ್ಯಕಂಠೀರವನಾ ॥ ೫ ॥

ಸನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೀಡಧ್ವಜಂ ಪೋಲೆ ಕ
ರ್ಬಿನ ಬಿಲ್ಲಂ ಗೆಲೆ ಪುರ್ಬು ಚಂದ್ರಬಲಮಂ ಕೈವಾರದಿಂದಂ ತದಾ ॥
ನನಚಂದ್ರಂ ಕುಡೆ ದೇಸೆ ಪೊಚ್ಚಪೊಸತಾಯ್ತೆಂಬನ್ನೆಗಂ ಮಾೞ್ಕೆ ನೂ
ತನಕಂದರ್ಪನನೂನದಾನಗುಣದಿಂ ಚಾಳುಕ್ಯಕಂದರ್ಪನಾ ॥ ೬ ॥

ಪದಿನಾಱಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ ।
ದಿದ ಶೃಂಗಾರಮದಲ್ಲವೊಂದೆ ರಸಮೊಂಬತ್ತೆಯ್ದೆ ತಂಬಟ್ಟುವೆಂ ॥
ಬುದನೆಂಬನ್ನೆಗಮಂಗನೋಚಿತರಸಾಲಂಕಾರಮಂ ತಾಳ್ದಿದೊ ।
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀಮುಖಾಂಭೋಜದೊಳ್ ॥ ೭

ನೆಗ*ೞ್ದುದು ರಾಮಾಯಣಮುಂ ।
ನೆಗ*ೞ್ದುದು ಭಾರತಮುಮಾಮಹಾ[2]ಕವಿಗಳಿನಾ[2] ॥
[ನೆಗ*ೞ್ದರ್ ವ್ಯಾಸರ್ ವಾಲ್ಮೀ-]
ಕಿಗಳೆನೆ ನೆಗ*ೞ್ದುಭಯಕವಿಗಳೆಮಗಭಿವಂದ್ಯರ್ ॥ ೮ ॥

1 ವಿಜಯ 1 - ಮುದ್ರಿತ ಪುಸ್ತಕದ ಪಾಠಾಂತರವು.

2 ಕವಿಗಳನಾ 2 —ಮು. ಪು. ಪಾ.

[1][ವೃದುಪದ್ಯರಚನೆಯೊಳ್ ಕಾ- ।
ಳಿದಾಸನುಂ ಗದ್ಯರಚನೆಯೊಳ್ ಬಾಣನುಮಂ- ॥
ಕದ ಕವಿಗ(ಳೆನಿಸಿ) ನೆಗಟ್ದಿ-।
ರದಜೆಂ ಸತ್ಕವಿಗಳಿರ್ವ(ರೆ)ಮಗಭಿವಂದ್ಯರ್]¹ ॥ ೯ ॥

*
ಮದಮಣಿಯಿಲ್ಲ ದಾನಗುಣದಿಂ ನೆಗಟ್ದಂ ನೃಪಸಿಂಹನಾಗಿಯುಂ ।
ವಿದಿತವಿಶುದ್ಧಭದ್ರಗುಣನಂತೆ ವಿರುದ್ಧಮಿದೆಂಬಿನಂ ನಿಜಾ- ॥
ಭ್ಯುದಯನಿವೇದದೀರ್ಘಕರಮೊಪ್ಪೆ ಜಗತ್ಪ್ರಿಯನಾದ ದೇವನಂ- ।
ಕದ ಗಣನಾಯಕಂ ವರದನಕ್ಕೆಮಗಮ್ಮನಗಂಧವಾರಣಂ ॥ ೧೦ ॥

ನೆಟ್ಟನೆ ವಾಸವಂಗಮೃತವಾರಿಧಿಯೊಳ್ ಸುರಗಂಧವಾರಣಂ ।
ಪುಟ್ಟೆ ಸುರೇಂದ್ರರಾಜ್ಯಮುದಿತೋದಿತಮಾದುದು ದಾನದಿಂದೊಡಂ- ॥
ಬಟ್ಟಿರೆ ಭದ್ರಲಕ್ಷಣಗುಣಾನ್ವಿತನಮ್ಮನಗಂಧವಾರಣಂ ।
ಪುಟ್ಟೆ ನರೇಂದ್ರರಾಜ್ಯಮುದಿತೋದಿತಮಾಹವಮಲ್ಲದೇವನಾ ॥ ೧೧ ॥

1 (ವೃದು?) ಪದ್ಯರಚನೆಯೊಳ್ ಕಾ-
ಳಿದಾಸನುಂ ಗದ್ಯರಚನೆಯೊಳ್ ಬಾಣನುಮಂ- ॥
ಕದ ಕವಿಗಳಿರ್ವರುಂ ನೆಗ
*
ಟ್ದಿದಜೆಂ ಸತ್ಕವಿಗಳಿರ್ವರೆಮಗಭಿವಂದ್ಯರ್ ।[1]

[ರಾಷ್ಟ್ರಕವಿ ಶ್ರೀಮಾನ್ ಎಂ. ಗೋವಿಂದ ಪೈಗಳ ತಿದ್ದಿದ ಪಾಠಾಂತರವು. ಜಯಕರ್ನಾಟಕ ಸಂ. ೯. ಸಂಚಿಕೆ ೩ – ಪುಟ ೨೪೮. "ಕನ್ನಡ ಷಟ್ಪದಿಗಳು" ಎಂಬ ಲೇಖನದಲ್ಲಿ ಕೊಟ್ಟಂತೆ.]

1 ಮು. ಪು. ಪಾ. ಹೀಗಿದೆ:– (ತ್ರಿಪದಿ ?)

ಪದ್ಯರಚನೆಯೊಳ್ಕಾಳಿದಾಸನುಂ
ಗದ್ಯರಚನೆಯೊಳ್ ಬಾಣನುಂ ಮುಂಕವಿಗಳಿರ್ವರುಂ
ನೆಗಟ್ದಿರದಜೆಂ ಸತ್ಕವಿಗಳಿರ್ವರುಮೆಮಗಭಿವಂದ್ಯರ್ ॥

ಒರೆ ಗರ್ಭಕ್ಕರಿವಸ್ತುವಾಹನಚಯಂ ಕಯ್ಗೆಯ್ದುವಂದತ್ತು ಪ್ರ- ।
ಟ್ಟೆ ರಣೋತ್ಸಾಹದೆ ಚಕ್ರವರ್ತಿವಿಭವಂ ಪುಟ್ಟಿತ್ತು ಕಯ್ಸಾರ್ತಿ ಸಿಂ- ॥
ದಿರೆ ಪತ್ತಿತ್ತು ಸಮಸ್ತಧಾತ್ರಿವಳಯಕ್ಕೆಂದುಂ ದಿಶಾದಂತಿಗ- ।
ಳ್ಗೆರೆಗಂ ತಂದೆಯ ಕೀರ್ತಿಯೇಂ ಬಳೆದುದೋ ಸತ್ಯಾಶ್ರಯಂ ಧನ್ಯನೋ
॥ ೧೨ ॥

ದೊರೆಯಾದುದು ದುರ್ಯಶದೊಳ್ ।
ಪೊರೆಯದ ಚರಿತಂ ಪುರಾಣ[1][ಚರಿತದೊಳವನಾ! ॥
ನೆರೆಯಲ[1]]ಕಲಂಕಚರಿತಂ ।
ದೊರೆಯಾದುದೊ ಸಕಲಸತ್ಯಚಕ್ರೇಶ್ವರನಾ ॥ ೧೩ ॥

ಕಮಲೋದಯನಖಿಲಮಹೀ ।
ರಮಣನುಮಾಪ್ರಿಯನೆನಿಪ್ಪ ಗುಣದುನ್ನತಿಯಿಂ ॥
ಕಮಲಕುಲೋದ್ಭವ[2][ನುಂ][2] ವಿ- ।
ಷ್ಣುಮೂರ್ತಿ ರುದ್ರಾವತಾರನಿಜೀವಬೆಡಂಗಂ ॥ ೧೪ ॥

ಅಂತವನಿಪನಿಕರಂ ಕ- ।
ಯ್ಯಾಂತ ವನಿಪನಿಕರವೊಂದು ಕೋಟಿಗೆ ಮಿಗಿಲೆಂ ॥
ಬಂತಾದೊಡವೊಳಸೋಜಿದೆ ।
ಚಿಂತಿಸದಾಂತಿಜೀಗುಮಿಗುಮಿಜೀವಬೆಡಂಗಂ ॥ ೧೫ ॥

*
ನೆಗಟ್ಟಿರಿಘೂರ್ಜರದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೂ- ।
ಟ್ಟಗೆ ಸಮರಾಗ್ರದೊಳ್ ಪರಿಯೆ [3]ಪಿಂತಗೆ[3] ಸಂದುವು ರಾಜಪುತ್ರರಾ ॥
ನೆಗಳೆಸೆ ಮುನ್ನಮೆಂಬ ಬಟೀಕೆಂಬ ಜನೋಕ್ತಿಯೊಳಾಯ್ತು ಸೂಚಿಕ- ।
ಕ್ತಿಗೆ ನೃಪನಾನೆ ದಾರದವೊಲಾದುವು ರಾಜಕುಮಾರರಾನೆಗಳ್ ॥ ೧೬ ॥

1 ಪುರುಷಚರಿತದೊಳ್ । ಅರರೆ! ಅ 1 —ಮು. ಪು. ಪಾ.
2 ಮಿಗೆ 2 —ಮು. ಪು. ಪಾ.
3 ಪಿಂತಸೆ 3 —ಮು. ಪು. ಪಾ.

ರಣದೊಳರಾತಿವಾರಣಘಟಾಳಿಯನೊರ್ವನೆ ಗೆಲ್ದನೊಂದು ವಾ- ।
ರಣದೊಳನೂನದಾನಗುಣದರ್ಪಿತಪೂರಣನಿಷ್ಟತುಷ್ಟದಾ ॥
ರಣನವದಾತಕೀರ್ತಿಗೃಹತೋರಣನನ್ಯನರೇಂದ್ರಗಂಧವಾ- ।
ರಣಮದವಾರಣಂ ವಿಜಯಕಾರಣನನ್ಯನಗಂಧವಾರಣಂ ॥ ೧೭ ॥

ನೆಱೆಗೊಂಡುದು ನಾರಾಚಂ ।
ನೆಱೆಗಾಣಲ್ಕಾರ್ತರಿಲ್ಲ ಬೀರಕೆ ಬೀಱು- ॥
ಕ್ಕಿಱಿವ ಬೆಡಂಗನೊಳಾರ್ ದೊರೆ ।
ನೆಱೆ ತೋರ್ಕುವೆ ಶತ್ರುಜನಕಮರ್ಥಿಜನಕ್ಕಂ? ॥ ೧೮ ॥

ಒಂದನೆ ನಂಬಿದೆನ್ನಣುಗದಮ್ಮನನಿಕ್ಕಿದನಂ ಪೊರಳ್ಚಿ ಕೊಂ- ।
ದಂದಱೆಯುಟ್ಟವುಟ್ಟಿ ಪಿಡಿತಂದು ಚಲಂ ನಿಲೆ ಮೀಯಲೆಂದು ಪೂ- ॥
ಣ್ದಂದದೆ ಮೀಯುದಿರ್ದಹಿತನಂ ಕಡಿದಾಗಳೆ ಮಿಂದನಾಚಲಂ ।
ಸಂದುದಱಿಂ ಸಮಂ ಪರಶುರಾಮನಿನಾಕುವರಾಂಕರಾಮನಿಂ ॥ ೧೯ ॥

ದಿನಪಂ ತೋರ್ಪಂ ಮಧ್ಯಂ ।
ದಿನದೊಳ್ ತೇಜದ ಪೊಡರ್ಪನುದಯದೊಳ್ ಜಗ ॥
ಜ್ಜನಕಂ ತೋಱಿದಪಂ ರಿಪು ।
ಜನಕಂ ತೇಜದ ಪೊಡರ್ಪನಿಱಿವಬೆಡಂಗಂ ॥ ೨೦ ॥

ಹರಚರಣಕಮಲಭೃಂಗಂ ।
ವರಾಂಗನಾಸಂಗಸಮರಸಾಹಸತುಂಗಂ ॥
ಪರಹಿತಕುಲಪ್ರಸಂಗಂ ।
ನಿರಸ್ತದೋಷಾನುಷಂಗನಿಱಿವಬೆಡಂಗಂ ॥ ೨೧ ॥

ಒದವಿದ ಭೀತಿಯಿಂದಮಪರಾಧಿತನಬ್ಧಿಯನೋಡಿ ಪೊಕ್ಕೊಡಾ- ।
ಗದು ಕೊಲಲೆಂದು ವಾಣ್ಬನದು ತಕ್ಕುದೆ ಲಿಂಗಮನಪ್ಪುಕೆಯ್ದು ಪಿಂ- ॥
ಗದೆ ನಿಲೆ ನೀರನೋಡಿ ಪುಗೆ ಪೆಣ್ಬುಡೆಯುಟ್ಟಿರೆ ಪುತ್ತನೇಱೆ ಕೊ- ।
ಲ್ಲದ ತುಱುಲಾಕ್ಷನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ ॥ ೨೨ ॥

ಜಲಧಿಯ ಸತ್ಯಾಶ್ರಯಬಲ ।
ಜಲಧಿಯ ನಡುವಣುರ್ವ ಕೋಪಶಿಖಿಗಳ ನಡುವಿ- ।
ರ್ದಲೆನೊತ್ತಿದ ಪುಳ್ಳಿಯ ಪುಟ- ।
ಪೊಲಿರ್ದನತಿಚಕಿತಚಿತ್ತನಪರಾದಿತ್ಯಂ ॥ ೨೩ ॥

ಹುತವಹಬಾಣದಿಂದವಿಸೆ ತೂಳ್ದುದು ವಾನರಸೇನೆ ಕಟ್ಟೆ ಪ- ।
ರ್ವತತತಿಯಿಂದೆ ಕಟ್ಟುವಡೆದತ್ತಪರಾಬ್ಧಿ[1]ಪ[ತಿಪ್ಲವಂಗದಿಂ ॥
ಕ್ಷತಶತ][1]ಮಾದುದಾ ಪರಶುರಾಮನಿನಾ ರಘುರಾಮನಿಂ ಸರಿ- ।
ತ್ಪತಿ ಕುವರಾಂಕರಾಮನಿನದೇಂ ಕಱಿವಾದುದೊ ಮೂಱುಸೂಟಿಯೊಳಂ ॥ ೨೪ ॥

ತ್ರಿಪುರಂ ಬೆಂದುದು ರುದ್ರನಿಂ ಕೃತಯುಗಪ್ರಾರಂಭದೊಳ್ ದಾನವೇಂ-
ದ್ರಪುರಂ ತ್ರೇತೆಯೊಳಂಜನಾತನಯನಿಂ ದ್ವಾಪಾರದೊಳ್ ಖಾಂಡವಂ ॥
ಕಪಿರಾಜಧ್ವಜನಿಂ ಚತುರ್ಥಯುಗದೊಳ್ ಚಾಳುಕ್ಯಮಾರ್ತಂಡನಿಂ- ।
ದಪರಾದಿತ್ಯನ ಮಂಡಲಾಂಶುನಗರಂ[2][ಶಾಂತಾರ್ಣ][2]ವಂಶಾರ್ಣವಂ ॥ ೨೫ ॥

ಕಂಡೆಂ ಗ್ರಹಣಮನದನಾ- ।
ಖಂಡಲದಿಙ್ಮುಖದೆ ಬಂದು ಸರ್ವಗ್ರಾಸಂ- ॥
ಗೊಂಡತ್ತಪರಾದಿತ್ಯನ ।
ಮಂಡಲಮುಂ ಬಾಹುರಾಹು ಸತ್ಯಾಶ್ರಯನಾ ॥ ೨೬ ॥

ಗಿರಿದುರ್ಗಂಗಳನೇಱಿಯನ್ಯಪುರದೊಳ್ ರತ್ನಾಳಿಕೇರಾಂಬುವಂ ।
ಮರವಾಯ್ದೊಡ್ಡಿರಿ ಕೊಂಡುಬಂದುದಪರಾಂಭೋರಾಶಿಯೊಳ್ ಪುಟ್ಟಿಗ-
ಪ್ಪುರದೊಳ್ ಬೂದಿಯನೊಟ್ಟಿಕೊಂಡುದದಱಿಂ ಮತ್ತೇಭವಿಕ್ರೀಡಿತಂ ।
ದೊರೆವೆತ್ತಮ್ಮನಗಂಧವಾರಣಮಿದೇನನ್ವರ್ಥಮಾಗಿರ್ದುದೋ ॥ ೨೭ ॥

1 [ದುಷ್ಪ್ಲವಂಗದಿಂ ॥ ಪ್ರತಿಹತ] 1 — ಮು. ಪ್ರ. ಪಾ.
2 ಶಂತರ್ಣ 2 — ಮು. ಪ್ರ. ಪಾ.

ಮುನಿದಿರ್ಪತ್ತೊಂದು ಸೂೞ್ ಕ್ಷತ್ರಿಯರನಱಸಿ ಕೊಂದಿಕ್ಕಿದಾ ರಾಮನಿಂದಿ।
ತ್ತ ನರೇಂದ್ರರ್ ಪೊಕ್ಕರಿಲ್ಲೊರ್ಬರುಮಿವನಧಿಕಂ ಪೊಕ್ಕನೆಂದಾಪವನ್ ಬ॥
ರ್ಪಿನಮಿರ್ಪತ್ತೊಂದನಿತ್ತುಂ ಕರಿಗಳನಪರಾದಿತ್ಯನಂತೀಯುದಂದಾ ।
ತನನಿರ್ಪತ್ತೊಂದುಮಂಶಂ ಕಿಡೆ ಮುಳಿದನೊ ಸತ್ಯಾಶ್ರಯಂ ಸಾರ್ವಭೌಮಂ
॥ ೧೮ ॥

ಉಱದಿರ್ಪುದುಱದೆ ನಿಮ್ಮಡಿ- ।
ಗೆಱಗುವ್ರದೋಲಗಿಪುದೇಕೆ ಕೇಳ್ದುಱೀಯರೆ ತಾ- ॥
ನಿಱೀವಂ ಪೆಱರ್ಗಿಱೀವಂ ತನ- ।
ಗಿಱೀವಂ ಮೇಣ್ ಮೆಱೆವನೀವನಿಱೆವಬೆಡಂಗಂ ॥ ೧೯ ॥

ಬೆಳಗುವ ಸೊಡರೊಳ್ ಸೊಡರಂ ।
ಬೆಳಗಿ ಪಲರ್ ಕೊಂಡುಪೋಗೆಯುಂ ಕುಂದದೆ ಪ- ॥
ಜ್ಜಳಿಸುವವೊಲ್ ಜಗಮೆಲ್ಲಂ ।
ಕೊಳಲುಂ ತವದಿತ್ತು ಮೆಱೆವನಿಱೆವಬೆಡಂಗಂ ॥ ೨೦ ॥

ಎಸಿಸಿದ ಸತ್ಯಾಶ್ರಯದೇ- ।
ವನ ಪೃಥ್ವೀವಲ್ಲಭಂ ಕಥಾನಾಯಕನಾ- ॥
ಗನಿಲಜನೊಳ್ ಪೋಲಿಸಿ ಪೇ- ।
ೞ್ದಿಸೀಗದಾಯುದ್ಧಮಂ ಮಹಾಕವಿರನ್ನಂ ॥ ೨೧ ॥

ಕೃತಿ ನೆಗೞ್ದ* ಗದಾಯುದ್ಧಂ ।
ಕೃತಿಗೀ[1][ಶಂ][1] ಚಕ್ರವರ್ತಿ ಸಾಹಸ ಭೀಮಂ ॥
ಕೃತಿಯಂ ವಿರಚಿಸಿದನಲಂ- ।
ಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ! ॥ ೨೨ ॥

ಮೊದಲೊಳ್ ಬದ್ಧವಿರೋಧದಿಂ ನೆಗೞ್ದ* ಕುಂತೀಪುತ್ರರೊಳ್ ಭೀಮನಂ-।
ಕದ ಗಾಂಧಾರಿಯ ಪುತ್ರರೊಳ್ ಮೊದಲಿಗಂ ದುರ್ಯೋಧನಂ ಧರ್ಮಯು॥

1 ಶ್ವರ 1—ಮು. ಪು. ಪಾ.

ದ್ಧದೊಳಂತಾತನಸಿಕ್ಕಿಕೊಂದನದಱಿಂ ಭೀಮಂ ಜಯೋದ್ದಾಮನೆಂ
ಬುದನೆಂಬಂತಿದು ಪಸ್ತಿಯುದ್ಧಮೆನಿಸಲ್ ಪೇೞ್ದಂ ಗದಾಯುದ್ಧಮಂ
॥ ೨೩

ಮೊದಲೊಳ್ ಸಾಮಂತರಿನಿನಿ- ।
ಸುದಿತೋದಿತನಾಗಿ ಮಂಡಲೇಶ್ವರನಿಂದ- ॥
ಭ್ಯುದಯಪರನೆನಿಸಿ ಚಕ್ರಿಯಿ- ।
ನುದಯಪರಂಪರೆಯನೆಯ್ದಿದಂ ಕವಿರನ್ನಂ ॥ ೨೪ ॥

ಉದಧಿಯನೆಯ್ದಿ ದಿಗ್ಗಜಮನೆಯ್ದಿ ಕುಲಾದ್ರಿಯನೆಯ್ದಿ ನೀೞ್ದು ನಿ- ।
ಲ್ವುದು ಜಸಮಿತ್ತ*ಗಿತ್ತ ಧನಮೇನದು ನಿಲ್ವುದೆ ಮುನ್ನಮಿತ್ತರೆ- ॥
ಲ್ಲಿದರವರೀಯೆ ಪೆತ್ತವರುಮೆಲ್ಲಿದರಾ ಧನಮೆಲ್ಲಿತಿಂದ್ರಜಾ- ।
ಲದ ಸಿರಿಗೇಕೆ ಮೆಳ್ಪಡುವಿರೆಂದೊಱೆದಂ ಕವಿಕುಂಜರಾಂಕುಶಂ ॥ ೨೫ ॥

ನೆಗಟ್ಟಿ* ರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ।
ಬಗೆಗೊಳಲಿಂತು ಪೇೞ್ವುದು ಮಹೀಭುಜಸಾರ್ಥಕಮಲ್ಲದಂತೆ ಕೆ- ॥
ಮ್ಮಗೆ ಕೊಳಲಾಟಿಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಱನೋ ।
ಪಗೆವನೊ ಮೊಮ್ಮನೋ ಮಗನ ದಾಯಿಗನೋ ಬುಧಸೇವ್ಯನಂದನಾ
॥ ೨೬ ॥

ಪಡೆಯೊಡೆಯ ಕಡೆಯ ಬಡವರ್ ।
ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ ॥
ಪಡೆದಂ ಮಹಿಮೋನ್ನತಿಯಂ ।
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ॥ ೨೭ ॥

ಆರಾತೀಯಕವೀಶ್ವರ- ।
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ- ।
ಡಾರದ ಮುದ್ರೆಯನೊಡೆದಂ ।
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥ ೨೮ ॥

ರಸಮಂ ಭಾವಮುಮಂ ಕಾ- ।
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ ॥
ಪೊಸದೇಸೆಯ ನುಡಿಗಳೊಳಂ ।
[1]ಪೊಸಯಿಪ[1] ಬಲ್ಮೆಗೆ ಚತುರ್ಮುಖಂ ಕವಿರನ್ನಂ ॥ ೩೯ ॥

ಮೊರೆಯಱಿವ ವಸ್ತುಪುರುಷರ್ ।
ಪರಿಕಿಸಿ ಬೆಲೆಮಾಡೆ ಗಂಗಮಂಡಲಚಕ್ರೇ ॥
ಶ್ವರಕಟಕೋತ್ತಮನಾಯಕ ।
ನಿರಚನೆಯಿನನರ್ಘರತ್ನಮಾದಂ ರತ್ನಂ ॥ ೪೦ ॥

ವಸುಧಾಧಿಪತಿಯ ಕಟಕದೊ- ।
ಳೆಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇ- ॥
ರಿಸಿದುದಱಿಂದೀಗಳ್ ರಂ- ।
ಜಿಸಿದ ಮಹಾರತ್ನಮೆನಿಸಿದಂ ಕವಿರತ್ನಂ ॥ ೪೧ ॥

ಕನ್ನಡಮೆರಡಱುನೂಱಱ ।
ಕನ್ನಡಮಾತಿರುಳಕನ್ನಡಂ ಮಧುರಮನ್ಯೋ ॥
ತ್ಪನ್ನಂ ಸಂಸ್ಕೃತಮೆನೆ ಸಂ- ।
ಪನ್ನಂ ನಗ*ಬ್ಬುಭಯ ಕವಿತೆಯೊಳ್ ಕವಿರನ್ನಂ ॥ ೪೨ ॥

ಶ್ರುತರಮಣೀಯನೆ ಕವಿತಾ ।
ಚತುರನೆ ಚಾರಿತ್ರಮಣಿವಿಭೂಷಣರತ್ನಂ ॥
ಶ್ರುತರಮಣೀಯನೆ ಕವಿತಾ ।
ಚತುರನೆ ಚಾರಿತ್ರರತ್ನಜಲಧಿಯ ರತ್ನಂ ॥ ೪೩ ॥

ರತ್ನಪರೀಕ್ಷಕನಾಂ ಕೃತಿ ।
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ- ॥

1 ಪೊಸೆಯಿಪ 1—ಮು. ಪು. ಪಾ.

ರತ್ನಮುಮಂ ರನ್ನನ ಕೃತಿ ।
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಬಿರ್ದೆಯೋ ॥ ೪೪ ॥

ಒಳಪೊಕ್ಕು ನೋಡೆ ಭಾರತ- ।
ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ ॥
ತೊಳಕೊಂಡತ್ತೆನೆ ಸಿಂಹಾ- ।
ವಳೋಕನಕ್ರಮದಿ ಸಜಿಸಿದಂ ಕವಿರನ್ನಂ ॥ ೪೫ ॥

ವನಿತಾನಾಯಕರತ್ನಂ ।
ತನೂದರೀಕನಕಸೂತ್ರರತ್ನಂ ಕಾಂತಾ- ॥
ಸ್ತನಹಾರರತ್ನಮಬಲಾ ।
ಜನಚೂಡಾರತ್ನಮೆನಿಸಿದಂ ಕವಿರತ್ನಂ ॥ ೪೬ ॥

ಕವಿಗಳೊಳಾ ಪುರಾಣಕವಿಪುಂಗವರೊಳ್ಳಿದರೀಗಳಿಲ್ಲ ಸ- ।
ತ್ಕವಿಗಳೆನಲ್ಕವೇಡವರ ಪೋದೊಡಮಂದಿರ ಕಬ್ಬಮಿನ್ನುಮಂ ॥
ಪ್ರವ ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾಮೆ ಪೇ
ೞ್ವೆ ಬುಧರಿರ್ದುಂ ನೋೞ್ಪುದು ಪುರಾತನನೂತನಕಾವ್ಯರೀತಿಯಂ ॥ ೪೭ ॥

ಗುಣಮನೆ ತೋರ್ಪಂ ದೋಷದ ।
ಗುಣಂಗಳನೆ ನೆಗೞ್ದು ತೋರ್ಪ ದುರ್ಜನಸುಮಮೇಂ ॥
ಗುಣಗಣನೆಗೆ ತೋರ್ಪಂ ಕೃತಿ ।
ಗುಣದೋಷಪರೀಕ್ಷೆಗಾರನಾರ್ ಬಾಜಪರೋ ॥ ೪೮ ॥

ಶ್ರೀಯುತನೊಳುದಾರತೆ ವಾ- ।
ಕ್ಶ್ರೀಯುತನೊಳಮತ್ಸರತ್ವಮಾಗದುದಾರಂ ॥
ಶ್ರೀಯುತನಮತ್ಸರಂ ವಾ- ।
ಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ ॥ ೪೯ ॥

ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ ಕಿಱಿದುಂಟು ಬಲ್ಮೆ ಶಿ-
ಕ್ಷಿತ್ರೆ ಕಿಱಿದುಂಟು ಪೇೞ್ದೊಡವ[1][ಂದ][1]ೞವಲ್ಲದುದಂತಣಂ ಸರ- ।
ಸ್ವತಿ ವರವಿತ್ತವೊಲ್ ಕೆಲಬರೋದದೆ ಕೇಳದೆ ಕಲ್ತಳಂತೆ ಗ- ।
ರ್ವಿತರದಪಿರ್ಪರರ್ಥಕೃತಿಗೇಂ ಮತಿವಂತರೊ ಪುಣ್ಯವಂತರೋ ॥ ೫೦ ॥

ವನರುಹಭವನೆನಿಸಿದ ದಂ- ।
ಡನಾಯಕಂ ಕೇಳಿ ತಿರ್ದೆ ಪೇೞ್ಪಿಂ ಕವಿರ- ।
ತ್ನನ ಪೇೞ್ದ ಕೃತಿ ಯಶಶ್ರೀ ।
ವನಿತೆಗಲಂಕೃತಿಯೆನಿಸಿಪ್ಪುದೊಂದಚ್ಚರಿಯೇ ॥ ೫೧ ॥

ಕುರುಭೂಭೃದ್ಬಲಕೂಲತೂಲಪವನಂ ಕೌರವ್ಯಗಂಧೇಭಕೇ- ।
ಸರಿ ದುಶ್ಶಾಸನರಕ್ತರಕ್ತವದನಂ ದುರ್ಯೋಧನೋರುಕ್ಷ್ಮಾ- ।
ಧರವಜ್ರಂ ಕುರುರಾಜರತ್ನಮುಕುಟೋತ್ಕೋಟಾಂಘ್ರಿ ಸಂಘಟ್ಟಸಂ- ॥
ಗರನೆಂದೆಂದಭಿವರ್ಣಿಪಂ ರಣಯಶಶ್ರೀರಾಮನಂ ಭೀಮನಂ ॥ ೫೨ ॥

ದೆಸೆದೆಸೆಗೋಡಿದನ್ಯಕರಿ ದಿಕ್ಕರಿಯಾದುದರಾತಿಭೂಭುಜ ।
ಪ್ರಸರಮೆ ದಿಕ್ಪ್ರತಿಪ್ರಸರಮಾದುದು ವೈರಿಬಲಂ ಕುಮಾರಿಯರ್ ॥
ದೆಸಗೊಳೆ ದಿಕ್ಕುಮಾರಿಯರೆನಿಸಲ್ ದೊರೆಯಾದುದದರ್ಕೆ ಮೆಚ್ಚಿ ಬ- ।
ಣ್ಣಿಸಲಭಿಯೋಗಮಾಯ್ತೆನಗೆ ಸಾಹಸಭೀಮನ ಸಾಹಸಂಗಳಂ ॥ ೫೩ ॥

ಕರಮಿಱಿದು ಹಿಡಿಂಬಜಟಾ- ।
ಸುರರ ಜರಾಸಂಧಸಂಧಿಗಳುಮಂ ಬಕನಂ ॥
ಹರಣಂ ಕೀಚಕಮಥನಂ ।
ನಿರಸ್ತಮಿಂತವೈರಿನಿವಹಗಜಸಿಂಹಬಲಂ ॥ ೫೪ ॥

ಅಳಿದುಶ್ಶಾಸನಕೃಷ್ಣಲೋಹಿತಜಲಾಶ್ಲಿಷ್ಟಂ ಕುರುಪ್ರೋದ್ಭವ ।
ಪ್ರಳಯಜ್ವಾಲೆ ಸುಯೋಧನೋರುಮಕುಟೋದ್ಘಟ್ಟಪ್ರತಿಜ್ಞಾಕ್ಷರಾ- ॥

1 'ನ್ವ' 1 ಮು. ಪ್ರ. ಪಾ.

ವಳಿಪಿನ್ನಸ್ತ್ರವಿಶಾಲಸಿಕ್ಷ್ವಳಶಿಲಾಸ್ತಂಭಂ ಕುರುಕ್ಷೇತ್ರದೊಳ್ ।
ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ
॥ ೫೫ ॥

ಆಪ್ರಸ್ತಾವದೊಳ್ ದೃಷ್ಟಾದೃಷ್ಟಪರಂಪರೆಯೆಂಬ ವೃದ್ಧಕಂಚು
ಕಿಯುಂ ಬುದ್ಧಿಮತಿಯೆಂಬ ಮೇಳದ ಕೆಳದಿಯುಂಬೆರಸು ದೇವಾಸುರ
ಯುದ್ಧಕ್ಕೆ ಕರಗಂಜೊತ್ತಳೆಂಬಂತನವರತಬಾಷ್ಪವಾರಿಧಾರಾಪೂರಪರಿಪ್ಲಾ
ವಿತಪಲ್ಲವನೇತ್ರೆಯುಮಸಹ್ಯಪರಿಭವಾನಲದಂದಹ್ಯಮಾನಗಾತ್ರೆಯುಮಾ
ಗಿ ಯಜ್ಞವೇದೀಸಂಭವೆಯುಂ ಯಜ್ಞಸೂನುಪ್ರಂ ದ್ರುಪದರಾಜೋಪನ
ಜಯುಮೈಜಂತಿಯುಮೆನಿಸಿದ ಪಾಂಚಾಲರಾಜತನೂಜೆ ಪವಮಾನತನೂ
ನಲ್ಲಿಗೆವಂದು

ದನುಜವಿರೋಧಿ ಮಾಡಿದೊ[ಡಮಾಗದ ಸಂಧಿಯೊಳೇನೊ?] ನಿನ್ನ ಕೈ- ।
ಪಿನೊಳವಶಿಷ್ಟ[ನಿರ್ಧನ] ಸುಯೋಧನಮಾ[ಯ್ತುರಿಪೇನೆ] ಸಿಂಧುನಂ- ॥
ದನಧೃತರಾಷ್ಟ್ರರಿದೊರ್ಜಿಯೆ ಸಮ್ಮರಸಂ ಮರಳ್ದುಂಬುಕೆಯ್ಯ್ವೆಮಂ- ।
ದನುಶಯಮಾದುದಿಂದೆನಗೆ ಸಂಶಯಮುಂ ಕಳೆ ಕೌರವಾಂತಕಾ ॥ ೫೬ ॥

ಖಳದುಶ್ಶಾಸನವಕ್ಷ- ।
ಸ್ಸ್ಥಳೋಚ್ಚಲತ್ಕೃಷ್ಣರಕ್ತಜಲದಿಂ ಕೋಪಾ- ॥
ನಳನಂ ಮುಟ್ಟಿಸದಿನ್ನುಂ ।
ಗಳಗಳಿತಸಕೋಪನಿರ್ಪ ತೇಜದಿಂದಿರ್ದಯ್ ॥ ೫೭ ॥

ಸಮವಾಯಮುಹಿತರೊಳ್ ಸಂ- ।
ಧಿಮಾಡಿ ಯಮಸೂನು ಪೇಟಿ ವನವಾಸವೆ ದಲ್ ॥
ನಿಮಗೆ ಶರಣೆನಗಮುಂದ- ।
ಗ್ನಿಮುಖದೆ ಪುಟ್ಟಿದುದಱಿಂದೆ ಶರಣಗ್ನಿಮುಖಂ ॥ ೫೮ ॥

ಎಂದು ನೊಂದು ನುಡಿಯೆ ಮರುನ್ನಂದನಂ ದರಹಸಿತವದನಾರ-
ವಿಂದನಾಗಿ ತನ್ನಂತರ್ಗತದೊಳ್,—

ಕುರರಾಜಾನುಜಭೀಕರ ।
ಕರವಿಲುಳಿತನೀಲಕಬರಿಭರಮಂ ಪಿಡಿದುಂ ॥
ಪರಿಭವಿಸಲ್ ಕೃಷ್ಣೆಗೆ ಮಿಗೆ ।
ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ ॥ ೫೯ ॥

ಎಂದುಪಲಕ್ಷಿಸಿ,—

ಧಾತ್ರಿಯುಮನೀ ಹುತಾಶನ ।
ಪುತ್ರಿಯುಮಂ ಬಜಿದೆ ಸೋಲ್ತನಲ್ಲಂ ಜೂದಿಂ ॥
ಕ್ಷತ್ರಿಯತೇಜಮುಮಂ ಯಮ ।
ಪುತ್ರಂ ರಿಪುಗಂದೆ ಸೋಲ್ತನಾಗಲಿವೇಡಾ? ॥ ೬೦ ॥

ಎಂದನಿಲಸುತಂ ನಿಜಾಗ್ರಜಂಗೆ ಮುಳಿದು,—

ಪರವಶದೊಳಿರ್ದರೋ ಮೇಣ್ ।
ಪರಾರ್ಜಿತಪ್ರಾಣರಾದರೋ ದ್ರೌಪದಿಯುಂ ॥
ಪರಿಭವಿಸುವಲ್ಲಿ ನೋಡು- ।
ತ್ತಿರಲಕ್ಕುಮೆ ಪವನಸೂನುಗಂ ಪಾರ್ಥಂಗಂ ॥ ೬೧ ॥

ಎಂದು ತನಗಮರ್ಜುನಂಗಮೊಡನೆ ಮುಳಿದು.—

ವಿನಯಮನೆ ಬಗೆದು ವಿಕ್ರಮ- ।
ಮನೆ ಬಗೆಯದೆ ನರನುಮಾನುಮೆಮಗಂ ಸಮ್ಮೋ- ॥
ಹನಮಾಡುದಕ್ಕುಮಂದ- ।
ಜ್ಞನ ಸೂನೃತವಚನಮೆಂಬ ಮಂತ್ರಾಕ್ಷರದಿಂ ॥ ೬೨ ॥

ಎಂದು ಪಶ್ಚಾತ್ತಾಪಂಗೆಯ್ದು ಕುರುಕುಲವಿಳಯಜ್ವಾಲೆ ಸುಯೋಧನಪ್ರಳಯಕಾಳಿ ಪಾಂಚಾಲಿಯ ವದನಮಂ ನೋಡಿ,—

ಗಳಿಯಿಸುತಿರೆ ಕಬರಿಭರಂ ।
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ॥

ಸಲಿಲಾಸನೆ ನೀನಿರೆ ಕುರು ।
ಕುಲಾಂತಕಂ ಗಳಿತಕೋಪನೇ [ಕಲಿ] ಭೀಮಂ ॥ ೬೩ ॥

ಸತ್ಯಪ್ರತಿಜ್ಞನೆನೆ ಕುರು ।
ಪತ್ಯೂರುಕಿರೀಟಭಂಗಮಂ ಪಡೆದು ಜಗತ್ ।
ಸ್ತುತ್ಯಕೃತಕೃತ್ಯನೆನಿಸದೆ ।
ಸತ್ಯಾತ್ರ*ಯುವೆಸರ್ಗೆ ಮುಯ್ಯನಾಂಪನೆ ಭೀಮಂ ॥ ೬೪ ॥

ಸಂಗರರಂಗದೊಳಿಱಿವಬೆ– ।
ಡಂಗವೆಸರ್ ನೆಗಱ್ತೆ ನೆಗಱ್*ದ ಸಂಗರಮಂ ತೋ– ॥
ರ್ಪಂ ಗಡ ನೆಗಱ್*ವಾಹವಮ– ।
ಲ್ಲಿಂಗಂ ಜಾಕವ್ವೆದೇವಿಗಂ ಪುಟ್ಟಿದುದಂ ॥ ೬೫ ॥

ನೀನಗ್ನಿಪುತ್ರಿಯಯ್ ಪವ – ।
ಮಾನಸತನೂಭವನೆನಾನಣಂ ಕೂಡೆ ಸುಸಂ– ॥
ಧಾನಮರಿನೃಪರೊಳೆಂತನ– ।
ಲಾನಿಲಸಂಯೋಗಮುಱಿಪದಿರ್ಕುಮೆ ಪಗೆಯಂ ॥ ೬೬ ॥

ಕುರುಕುಲಜೀವಾಕರ್ಷಣ ।
ಪರಿಣತಮಿದು ಕಾಳಹಸ್ತಮಲ್ಲದೆ ಪರಮೇ– ॥
ಶ್ವರಿ ಕೇಶಹಸ್ತಮಕ್ಕುಮೆ ।
ಪರಾಭವಜ್ವಲನಧೂಮಕೃಷ್ಣಂ ಕೃಷ್ಣೇ ॥ ೬೭ ॥

ತೊಡೆಗಳನುಡಿಯಲ್ ಗುರುಗಳ್ ।
ಕೊಡೆಸಕ್ಕೆಗಳಾಗೆ ಮಕುಟಭಂಗಂಮಾಡಲ್ ॥
ನುಡಿದೆನಗೆ ಮಕುಟಬದ್ಧರು– ।
ಮೊಡೆಸಿರ್ದರುಮವರೆ ಕಂಭಕಟ್ಟಿಗಳಾದರ್ ॥ ೬೮ ॥

ಕುರುನಂದನರಂ ಕೊಂದೆಂ ।
ಕುರುರಾಜಾನುಜನ ನೆತ್ತರಂ ಕುಡಿದೆಂ ಪೂ- ॥
ರ್ಣವೈರದಂ ತೀರ್ಚಿದೆನಿರ್ದಪು ।
ವೆರಡುಮುಮಂ ತೀರ್ಚಿ ತೀರ್ಚಲಿರ್ಪೆನೆ ಪಗೆಯಂ ॥ ೧೯ ॥

ಊರುಗಳನುಡಿವೆನೊದೆವೆಂ ।
ಕೌರವಪರಿಬೃಢನ ಮಕುಟಮಂ **ವೇಣೀಸಂ-** ॥
**ಹಾರಂಮಾಡುವೆ**ನದಱಿಂ ।
ಭಾರಮುದಿಸಿತಲ್ಲದೆನ್ನಪರಿಭವಭಾವಂ ॥ ೨೦ ॥

(ನವನಲಿನ ವೃತ್ತಂ)

ಕುರುಕುಲಶೋಣಿತಪಾದಪದ್ಮತಳಂ ತಳೋ- ।
ದರಿಗೆ ವೃಕೋದರನಾಗಿಪಂ ಕಚಬಂಧಬಂ- ॥
ಧುರತೆಯನಾತನ ಪೂಣ್ಕೆ ಪೂಣ್ಕೆ ಶಿಲಾತಳಾ- ।
ಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿವಾಳ್ಕಿಸೇ ॥ ೨೧ ॥

ಅಱಿನಮಗಂ ಪ್ರಾರ್ಥಿಸೆ ಬಾಂ- ।
ದೊಱೆಯುಮಗಂ ಮಾಡೆ ಸಂಧಿಯಾದಪ್ಪುದೆನುತುಂ ॥
[1]ಮಱುಗದಿ[ರಣ್ಣನ][1]ಮಾತಂ ।
ಪೆಱಗಿಕ್ಕುವೆನಜ್ಜನಿರ್ದು ಮಾಣ್ಬೊಡಮೀಯೆಂ ॥ ೨೨ ॥

ದಂಡಿತವೈರಿ ವೈರಿಬಲಲೋಹಿತಬಂಧುರದಂಡಮೀಭುಜಾ- ।
ದಂಡಮನಾಜಿಭೀಕರವಿರೋಧಿವಿದಾರಣದಂಡಮೀಗದಾ- ।
ದಂಡಮನುಗ್ರಪನ್ನಗವಿಭೀಷಣಮಾನವಕಾಂಡಮೀಧನು- ।
ರ್ದಂಡಮನುಳ್ಳೆನಂ ದ್ರುಪದನಂದನೆ ಸಂಧಿಯನಾಗಲೀವೆನೇ ॥ ೨೩ ॥

ಎಂದು ಮತ್ತಮಿಂತೆಂದಂ,—

---

1 ಮಱುಗುವೆನಜ್ಜನ ಮಾತಂ 1–ಮು. ಪ್ರ. ಪಾ.

ಕುರುರಾಜಾರ್ಣವಬಾಡಬಾಗ್ನಿ ಕುರುರಾಜಾರಣ್ಯದಾವಾನಲಂ ।
ಕುರುರಾಜಾಂಬುಜಚಂದ್ರರೋಚಿ ಕುರುರಾಜಾದ್ರೀಂದ್ರವಜ್ರಾಯುಧಂ ॥
ಕುರುರಾಜೋಗ್ರತಮಸ್ತಮೋರಿ ಕುರುರಾಜೇಭೇಂದ್ರಕಂಠೀರವಂ ।
ಪಿರಿದುಂ ಕಾಂತೆಯ ಮುಂದೆ ಪೂಣ್ದು ನುಡಿದಂ **ಚಾಳುಕ್ಯಕಂಠೀರವಂ**
॥ ೭೪ ॥

ಗದ್ಯ ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿಶ್ರೀಸಾಹಸಭೀಮವಿಜಯದೊಳ್ ಭೀಮಸೇನಪ್ರತಿಜ್ಞಾವರ್ಣನಂ ಪ್ರಥಮಾಶ್ವಾಸಂ ॥



## ॥ ದ್ವಿತೀಯಾಶ್ವಾಸಂ ॥

ಶ್ರೀಯಂ ಕುರುಭೂಭೃದ್ಬಲ– ।
ತೋಯಧಿಯೊಳ್ ಕಡೆದು ಪಡೆದು ಭುಜ[1]ಮಂ[ದರ]ದಿಂ[1] ॥
ದಾಯಾದಮಲ್ಲನೆನಿಸಿದ– ।
ಜೇಯಂ ಭುಜಬಲವಿಭಾಸಿ **ಸಾಹಸಭೀಮಂ** ॥ ೧ ॥

ಅಂತು ಕೌರವ್ಯಕುಲಕಾಲಾನಲನುಂ ದುಶ್ಶಾಸನದನುಜವಿಶಾಲವಕ್ಷಃಸ್ಥಳಕೇಳೀನೃಸಿಂಹನುಂ ಕುರುರಾಜಾನುಜಮಹಾಮಹೀಜಮೂಲೋನ್ಮೂಲನಪ್ರಳಯಪ್ರಭಂಜನನುಂ ಪ್ರಬಳರಿಪುಬಳಭುಜಬಲಪರಿಕ್ಷೇಪಘೂರ್ಣಿತಾರ್ಣಪ್ರಳಯಾರ್ಣವನುಂ ಪ್ರಚಂಡಭುಜಬಲಾವಷ್ಟಂಭಗಂಭೀರನುಂ ಕುರುರಾಜನಿರ್ವ್ಯಾಜನಿಬಿಡೋರುದ್ವಯಭಂಗಪ್ರತಿಜ್ಞಾಭಾರನುಂ ಫಣಿಪತಿಕೇತನಧೂಮಕೇತುವುಂ ಪಾಂಡವಬಲಪ್ರದೀಪನುಂ ಪಾಂಡವಬಲಪ್ರಾಕಾರನುಂ ಏಕಾಂಗವೀರನುಂ ಜರಾಸಂಧಸಂಧಿಬಂಧವಿಘಟನನುಂ **ಸತ್ಯಾಶ್ರಯಕುಲತಿಲಕನುಂ ಇರಿವಬೆಡಂಗನುಂ ಸಾಹಸಭಟರಜವನುಂ ಚಾಳುಕ್ಯನಾರಾಯಣನುಂ ಚಾಳುಕ್ಯಕಂಠೀರವನುಂ ಚಾಳುಕ್ಯಮಾರ್ತಂಡನುಂ ಅಕಲಂಕಚರಿತನುಂ ಅಮ್ಮನಗಂಧವಾರಣನುಂ ಸಾಹಸಾಂಕನುಮೆನಿಸಿದ** ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ, —

ಸಮದೇಭಕುಂಭಭೇದನ ।
ಸಮುದೋಗ್ರನಖಂಗೆ ಹರಿಗೆ ಮೃಗರಿಪುಪೆಸರು– ॥
ತ್ರಮಿಕೆಯೆ ನಿನಗೆ ಜರಾಸಂ– ।
ಧಮಥನ ಕುರುನೃಪಂಪೆಸರದೇನುನ್ನತಿಯೋ ॥ ೨ ॥

1 ಮಂದಲದಿಂ । ಮು. ಪ್ರ. ಪಾ.

ಇಱಿವಬೆಡಂಗ ದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ— ।
ರಿಱಿದು ಬ*ರ್ದುಂಕುವರಾ ನಿಜಭುಜೋಗ್ರಗದಾಪರಿಘಪ್ರಹಾರದಿಂ ॥
ಪಱಿವಱಿಯಾಗಿ ಪುಣ್ಣವೆಣಸಾಗಿ ಮರುಳ್ಗೆಣಸಾಗಿ ಯುದ್ಧದೊಳ್
ಕುಱುಂದಱಿಯಾಗಿ ಬಿಟ್ಟಿರಿಬಲಂಗಳೆ ಪೇೞವೆ ನಿನ್ನ ಬೀರಮಂ ॥ ೩ ॥

ಎಂದನಲನಂದನೆಯನಿಲನಂದನನಂ ಪೊಗೞ್ದು —

ಒಡಲೊಡಮೆಯೆಂಬಿವೆರಡುಂ ।
ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ ॥
ಕೆಡುವೊಡಲೊಡಮೆಯನೆಂದುಂ ।
ಕೆಡದೊಡಮೆಗೆ ಮಾಱುಗುಡುವುದಿಱಿವಬೆಡಂಗಾ ॥ ೪ ॥

ಮಣಿಕನಕಂ ವಸ್ತುವಿಭೂ— ।
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ॥
ಗುಣಮನೆ ಮೆಱಿವುದು ಶಸ್ತ್ರ ।
ವ್ರಣಮುಂ ನಿನ್ನಂತೆ ಮೆಱಿವುದಿಱಿವಬೆಡಂಗಾ ॥ ೫ ॥

ಎಂದು ಮೊದಲಿಸಿ ನುಡಿಯೆ ಬುದ್ಧಿಮತಿಯಿಂತೆಂದಳ್ —

ಎರೆವರ್ಗೀವಂ ಭಯದಿಂ ।
ಶರಣ್ಗೆವರೆ ಕಾವನೀವಕಾವಗುಣಕ್ಕಾರ್ ॥
ದೊರೆ ಪೆಱರಿಱಿವಬೆಡಂಗನ ।
ಕೊರಲೊಳ್ ಕೊಂಕುಂಟೆ ನುಡಿಯೊಳೇಂ ತೊದಳುಂಟೇ ॥ ೬ ॥

ಆರಯೆ ನೃಪರಾರುಂ ವಾ— ।
ಕ್ಸಾರರ್ ಕರ್ತವ್ಯಸಾರರಲ್ಲರದಂತಂ ॥
ತಾರುಮನಱಿವೆಂ ಕೇಳ್ ಸ್ಥಿತಿ ।
ಸಾರಂ ನಿನ್ನಸ್ವಸಾವನಿಱಿವಬೆಡಂಗಾ! ॥ ೭ ॥

ಎನಲುಂ; ವೃದ್ಧಕಂಚುಕಿಯಿಂತೆಂದಳ್:—ಅವರ ಪೂರ್ವಜಪ್ರ
ರಸುಗಳೊಳಗಂಯೋಧ್ಯಾಪುರಪರಮೇಶ್ವರನುಂ ಸತ್ಯಾದಿಗುಣಾಶ್ರಯ

ವಲ್ಲಭನುಮತಿಪ್ರೌಢದಿಶಾದಂತಿಪ್ರಕಟಪ್ರಭಾವನಪ್ಪ ಸತ್ಯಾಶ್ರಯದೇವನಿಂ, ವಿಷ್ಣುವರ್ಧನಾಪರನಾಮಧೇಯನುಂ ರಾಷ್ಟ್ರಕೂಟಗಜಘಟಾವಿಘಟನಸಿಂಹನೆನಿಸಿದ ಜಯಸಿಂಹದೇವನಿಂ ಅತಿಪ್ರವರ್ಧನಪ್ರಜಾನುರಾಗನುಮತಿಪ್ರಬಲರಣರಾಮನುಮೆನಿಸಿದ ರಣರಂಗಸಿಂಹನಿಂ, ವಾತಾಪಿಪುರವರೇಶ್ವರನುಮಶ್ವಮೇಧಯಜ್ಞದೀಕ್ಷಿತನುಂ ದ್ವೀಪಾಂತರಪ್ರಕಟಪ್ರಭಾವನುಮೆನಿಸಿದ ಪುಲಕೇಶಿದೇವನಿಂ, ಪರಿರಕ್ಷಿತಪವಿತ್ರವರ್ಮನೆನಿಸಿದ ಕೀರ್ತಿವರ್ಮದೇವನಿಂ, ತತ್ತನಯನಪ್ಪೆರಡನೆಯ ಸತ್ಯಾಶ್ರಯದೇವನಿಂ, ಆವನ ಕಿಱಿಯ ಮಗನಪ್ಪ ಮಂಗಳಾರ್ಣವನಿಂ, ಸತ್ಯಾಶ್ರಯನಪ್ಪೆರಡನೆಯ ಸತ್ಯಪ್ರತಿಯುಂ ತತ್ತನಯನಪ್ಪ ಆದಿತ್ಯವರ್ಮನಿಂ, ತದಪತ್ಯನಪ್ಪ ವಿಕ್ರಮಾದಿತ್ಯನಿಂ,ತತ್ಪುತ್ರನಪ್ಪ ದುರ್ಧರಮಲ್ಲನಿಂ ತನ್ನಂದನನಪ್ಪ ನಿರವದ್ಯಾಪರನಾಮಧೇಯನಪ್ಪ ವಿಜಯಾದಿತ್ಯಭಟ್ಟಾರಕನಿಂ, ತತ್ಸೂನುಮಿತ್ರನಪ್ಪ ವಿಕ್ರಮಾರ್ಣವನೆನಿಸಿದ ಕೊಂಕಣಿವಿಕ್ರಮಾದಿತ್ಯನಿಂ, ತತ್ಸೂನುಮಿತ್ರನಪ್ಪ ಕೀರ್ತಿವರ್ಮನಿಂ, ಆತನ ಕಿಱಿಯಮಗನಪ್ಪ ಭೀಮಪರಾಕ್ರಮನಿಂ, ತಜ್ಜಾತನಪ್ಪೆರಡನೆಯ ಕೀರ್ತಿವರ್ಮನಿಂ, ತತ್ಸೂನುವಪ್ಪ ಪಿರಿಯತೈಲಪನಿಂ, ಆತನ ಮಗನಪ್ಪ ಮುಕುಂದಿಯ ಕೊಂದ ಕುಂದಿಯ ಭೀಮನಿಂ, ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ, ಆತನ ಮಗನಪ್ಪ ರಣರಂಗಮಲ್ಲನೆನಿಪ್ಪಯ್ಯಣದೇವನಿಂ, ಆತನ ಮಗನುತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನಿಂ, ಚಾಳುಕ್ಯಕುಲೋದ್ಭವನಪ್ಪ ವಿಕ್ರಮಾದಿತ್ಯದೇವಂಗಂ ಚೈದ್ಯಕುಲೋದ್ಭವೆಯಪ್ಪ ಬೊಂಕಾದೇವಿಗಂ ಪುಟ್ಟಿದಂ ॥ ಸ್ವಸ್ತಿ ॥ ಸಮಸ್ತಭುವನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ರಾಜಪರಮೇಶ್ವರಂ ಪರಮಭಟ್ಟಾರಕಂ ಕರಹಟಭಯಂಕರಂ ಜಾದಿಳಾಂದ್ರಕುಲೀನಭುವನಸದ್ಗುಣಮಣಿವಿಭೂಷಣಂ ಸಿಂಧುರಕಂಧರಾಧಿರೂಢಪಲ್ಲಿಕೋಟೋಲ್ಲಂಘನಂ ಭದ್ರಕವಿದ್ರಾವಣಂ ಕೊಂಕಣಭಯಂಕರಂ ಉಭಯಬಲದಲ್ಲಣಂ ಮಾರ್ಮಲೆವರಿಗಜಕೇಸರಿ ಕರೀಂದ್ರಕಂಠೀರವಮಲ್ಲಂ ವೈರಿಫಣೀಂದ್ರಸೌಪರ್ಣಂ ಕ್ರಾಕಲಿಕರಾಜಗಜಕೇಸರಿ ರಣಕುಂಭಿಕುಂಭಕಂಠೀರವಂ ಯಾದವಕುಲಾಂಬರದ್ಯುಮಣಿ ರಣರಂಗಭೀಷಣಂ ರಿಪುಬಲಪುಂಜಗಜಘಟಾಭಂಜನಂ ಸಾಮಂತಮೃಗಶಾರ್ದೂಲಂ ರಣರಂಗರಾಕ್ಷಸಂ ಅಕಲಂಕರಾಮಂ ತಳವ

ನ್ನಿರಡನೆಯ ಹಿಡಿಂಬಿಯನೆ- ।
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ? ॥ ೯ ॥

ಮಾರುತಿ ನಿಜವೇಣೀಸಂ- ।
ಹಾರಂ ಮಾಡಿದೊಡೆ ಮಾೞ್ಪೆವೆನಗಂ ನಿನಗಂ ॥
ಪೂರಣೆಗೆ ಜಠರಪಿಠರಕ ।
ಪೂರಣೆಗೇಂ ಮಾಡದಂತು ಕರೆವೆಂ ನಿನ್ನಂ ॥ ೧೦ ॥

ಎಂದು ವಿದೂಷಕನಱುತ್ತುಂ ಬಂದ ತನ್ನಂ ನಗುತ್ತುಂ ಪ್ರೇಮಂತೆ ಸಂತೋಷಂಮಾಡಿದುದಕೊರ್ದಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್ ॥

ಅನ್ನೆಗಮಿತ್ತ ಶಂತನುತನೂಜನುಂ ಮಂದಾಕಿನೀನಂದನನುಂ ವಸಿಷ್ಠಶಾಪವಸುಂಧರಾವತೀರ್ಣಾವಶಿಷ್ಟವಸುವುಂ ಜಾಮದಗ್ನ್ಯಶಿಷ್ಯನುಂ ಪರಶುರಾಮವಿಜಯಿಯುಂ ಕನಕತಾಳಧ್ವಜನುಂ ದೇವವ್ರತಿಯುಂ ಸ್ವೇಚ್ಛಾಮೃತ್ಯುವುಂ ಕುರುಕುಲಪಿತಾಮಹನುಂ ಆಹವಭೀಷ್ಮನುಮೆನಿಸಿದ ಭೀಷ್ಮನ ಶರಶಯನದೊಳಂ । ಭಾರದ್ವಾಜಗೋತ್ರನುಂ ಕುಂಭಸಂಭವನುಮುಭಯಬಲಪ್ರಧಾನೋಪಾಧ್ಯಾಯನುಂ ತ್ರೈಲೋಕ್ಯಧನುರ್ಧರನುಂ ರುದ್ರಾವತಾರಜನಕನುಂ ಜಾಮದಗ್ನ್ಯಶಸ್ತ್ರಸರ್ವಸ್ವಪ್ರತಿಗ್ರಹಪ್ರಣಯಪವಿತ್ರಪ್ರಭಾವನುಂ ಚಾಪಸಾಮರ್ಥ್ಯಸಂಪನ್ನನುಂ ಶೋಣಾಶ್ವಸೇನಯುಜ್ಞಸಾರಥಿಯುಂ ಕನಕಕಲಶಧ್ವಜನುಮೆನಿಸಿದ ಬಿಲ್ಲಜಾಣಂ ದ್ರೋಣನಬೞಿವಿನೊಳಂ । ಸಿಂಧುದೇಶಾಧೀಶ್ವರನುಂ ದುಶ್ಶಳೆಯ ಮನೋನಯನವಲ್ಲಭನುಂ ಶಲ್ಯಸಾರಥಿಯುಂ ದುಶ್ಶಾಸನನ ಮನೋರಥಸಾರಥಿಯುಮೆನಿಸಿದ ತನ್ನ ಮೈದುನಂ ಜಯದ್ರಥನ ವಿಪತ್ತಿನೊಳಂ । ಭೌಮಸುತನುಂ ಶತಮುಖಸಹಾಯನುಂ ಚತುರ್ಲಕ್ಷಗಜಘಟಾವೇಷ್ಟಿತನುಂ ಸುಪ್ರತೀಕಸಿಂಧುರಬಂಧುರಕಂಧರಾಧಿರೂಢನುಂ ದೃಢಸಮುಯಬಾಹುಪ್ರಭಾವೋದಾತ್ತನುಮೆನಿಸಿದ ಭಗದತ್ತನ ಮರಣದೊಳಂ । ಕುರುಕುಲವೃದ್ಧನುಂ ಭೂರಿಭುಜಬಲಾವಷ್ಟಂಭಗಂಭೀರನುಮೆನಿಸಿದ ಭೂರಿಶ್ರವಸ

ವಿಯೋಗದೊಳಂ । ಸೌಬಲಬೃಹದ್ಬಲವಿಂದಾನುವಿಂದಪ್ರಭೃತಿಗಳಱವಿನೊಳಂ । ಯುವರಾಜನುಂ ದ್ರುಪದರಾಜನಂದನಾಂಬರಕಬರಿಕಾಕೃಷ್ಟಿಧೃಷ್ಟಕನುಮೆನಿಸಿದ ತನ್ನಣುಗದಮ್ಮಂ ದುಶ್ಶಾಸನನ ಪಂಚತ್ವಪ್ರಪಂಚದೊಳಂ । ದಿನಕರತನಯನುಂ ರಾಧೇಯನುಂ ಅಂಗವಿಷಯಾಧೀಶ್ವರನುಂ ಸ್ವಭಾವಶೌರ್ಯಾವತಾರನುಂ ಕಾಳವಟ್ಟಕಾರ್ಮುಕನುಂ ಕಾರ್ಮುಕಗುರುಶಿಷ್ಯನುಂ ಜಾಮದಗ್ನ್ಯಶಿಷ್ಯನುಂ ಸಹಜಕವಚಾಲಂಕೃತಶರೀರನುಂ ಮದಗಜಲಕ್ಷ್ಮಣಧ್ವಜನುಂ ಪ್ರತಿದಿನಪ್ರವರ್ತಿತಾಷ್ಟಾದಶಕೋಟಿಸುವರ್ಣದಾನಸಂತರ್ಪಿತಸಕಲಭೂಸುರಲೋಕನುಂ ಮಹಾಭಾರತಸಮರಸಾಗರಸಮುತ್ತರಣಪರಿಣತಾಂತಃಕರಣಪರಿಣತಕರ್ಣಧಾರನುಮೆನಿಸಿದ ತನ್ನಣುಗಾಳಪ್ಪ ಕರ್ಣನ ಸಾವಿನೊಳಂ । ಮದ್ರವಿಷಯಾಧಿಪತಿಯುಂ ವ್ಯಾಘ್ರಕೇತನನುಂ ಶಸ್ತ್ರನಿರ್ಭರನಿಪುಣನುಂ ಸಮರೇಭಶಲ್ಯನುಮೆನಿಸಿದ ತನ್ನ ಮಾವನಪ್ಪ ಶಲ್ಯನ ಸಂಹರಣದೊಳಂ । ಕುರುಕುಲ ಚೂಡಾಮಣಿಯುಂ ಗಾಂಧಾರೀಧೃತರಾಷ್ಟ್ರನಂದನನುಂ ಭಾನುಮತೀವದನಕಮಲಭಾನುವುಂ ಚಂದ್ರಮತೀನಯನಕುವಲಯಚಂದ್ರನುಂ ದುಶ್ಶಾಸನಾಗ್ರಜನ್ಮನುಂ ಲಕ್ಷ್ಮಣಜನಕನುಂ ಪನ್ನಗಪತಾಕನುಂ ಕನಕಲತಾಲಾಂಛಿತೋತ್ತುಂಗಘನಗದಾಯುಧನುಂ ದಿವ್ಯಮುನಿವರಾಪರಾಧನುಂ ಸಕಲಲಕ್ಷ್ಮೀನಿವಾಸನುಂ ಸಮರಧೈರ್ಯನುಂ ಮಹಾಶೌರ್ಯನುಂ ರಾಧೇಯನಿಜಸಹಾಯನುಂ ಛಲದಂಕಮಲ್ಲನುಂ ಸಕಲಭೋಗಲಕ್ಷ್ಮೀಪತಿಯುಂ ಅಭಿಮಾನಧನನುಮೆನಿಸಿದ ಸುಯೋಧನಂ ಚಿಂತಾಕ್ರಾಂತನಾಗಿ--

ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ ।
ನೊಸಲೊಳ್ ಕಣ್ ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತಮ್ಮಮ್ಮನ ॥
ಕ್ಕಿಸಲಂಬಂ ತಿರುವಾಯ್ಗೆ ತಂದಜೀವರೇ ತಾವಿರ್ವರುಂ ಕಯ್ದುವಂ ।
ಬಿಸುಟರ್ ಜೋಳದ ಪಾಳಿಯಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ
॥ ೧೧ ॥

ಮುಳಿದಾಂಪರ್ ಧರಣೀಶ್ವರರ್ ಪಿರಿಗೆ ಪೆಱರ್ ಬಿಲ್ಗೊಂಡುಮೇಗೆಯ್ವರೋ ।
ಸ್ನೇಹದಿಂ ತೀರದ ತನ್ನ ಕಾರ್ಯಭರಮಂ ತೀರ್ಚಲ್ ಪೆಱರ್ ಗಂಡರೇ ॥

ನ್ನೊಳರೇ ಪಾಂಡವರೆಂಬರೇಗಹನಮೆಂಬಾದರ್ಪದಂತಾಜಿಯೊಳ್ ।
ಸುಳರಂಬೆತ್ತಿರೆ ಸತ್ತರಿನ್ನಿನಿಬರುಂ ತಮ್ಮಂದಿರುಂ ಮಕ್ಕಳುಂ ॥ ೧೨ ॥

ಸದುಳಂಕುಳ್ಳಿರ್ದ ಮಗಾ ।
ಯದ ಮಾತಂ ತಗುಳೆ ಗಱಿಸಿ ಪೋದಂ ಸಂದಿ- ॥
ರ್ದ ದಟರೊಳಿಱಿದಱಿಯಂ ತ- ।
ನ್ನದೆ ಕಮ್ಮಱಿಯೋಜನೆನಿಸಿದಂ ಬಿಲ್ಲೋಜಂ ॥ ೧೩ ॥

ಅರ[ಸಂಗರಗಜ್ಜ]ದೊಳಂ ।
ಧುರದೊಳಮರಿಸೇನೆಗೆಂಬರದು ಪ್ರಸಿಯಾಯ್ತಂ ॥
ತೆರದಱಿ ಯೊಳೊಂದಱಿ ಫಲಮುಂ ।
ಪರಿಣತಿಗಾಯ್ತಿಲ್ಲನರ್ಥಕಂ ವಾಕ್ಯಾರ್ಥಂ ॥ ೧೪ ॥

ಒಸೆದರ್ಜುನಂಗೆ ಮುಂ ಕಳ- ।
ಶಸಂಭವಂ [ಮಾನ್ಯಪದವಿಯಂ ಮಾಡಿದೊಡಂ] ॥
ಬೆಸುಗೆಗಿಡೆ ಪಾಱಿಗಿಡೆ ತ- ।
ನ್ನಸುವಂ ತಿಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ ॥ ೧೫ ॥

ಈಯಲಿಱಿಯಲ್ ಶರಣ್ಬುಗೆ ।
ಕಾಯಲ್ ಕ್ಷತ್ರಿಯರೆ ಬಲ್ಲರ[1][ಬ್ರಹ್ಮಣ್ಯಂ ॥
ಭೋಯೆನಲುಂ ಬ್ರಾಹ್ಮಣರಪಿ
ಧಾಯೆನಲುಂ ಬಲ್ಲರಿಱಿಯಲವರೆಂತಱಿವರ್ ][1] ॥ ೧೬ ॥

ಚಾತುರ್ವರ್ಣ್ಯದೊಳಂ ದ್ವಿಜ ।
ಜಾತಿಗೆ ದರ್ಭಾಧಿಕಾರಮಲ್ಲದೆ ಮಂಕೆಯ ॥
ದ್ಭೂತನೃಪೋಚಿತಮರಿಯಂ ।
ಘಾತಿಪ ಶಸ್ತ್ರಾಸ್ತ್ರಮಾವರ್ಗೆ ಜಾತಿಸಿದ್ಧಂ ॥ ೧೭ ॥

1 ಲ್ಲದೆ ಬ್ರಹ್ಮರ್ ॥ ಭೋಯೆನಲುಂ ಬಲ್ಲರ್ ಕೊಲಧೋಯೆನಲುಂ ಬಲ್ಲರಿಱಿ
ಯಲವರೆತ್ತಱಿವರ್ 1 ಮು. ಪು. ಪಾ.

ಓಜಂ ಗಡ ಚಿಃ ಭಾರ- ।
ದ್ವಾಜಂ ಗಡ ಬಿಲ್ಲ ಬಲ್ಮೆಯುಂ ಕುಲಮುಂ ನಿ- ॥
ರ್ವ್ಯಾಜಂ ಮಸು*ೞ್ದುವು ಪಾಂಡುತ- ।
ನೂಜರ ಪಕ್ಕದೊಳ್ ಪಾೞಿಗಿಡೆ ನೆಗ*ೞ್ದುದಱಿಂ ॥ ೧೮ ॥

ಪ್ರಿಯಮಿತ್ರನೆನಗೆ ಕಮಲ- ।
ಪ್ರಿಯನಂದನನವನನೆನ್ನ ಪಕ್ಕದೆ[1] [ಪೞಿದ- ॥
ಪ್ರಿಯಮಂ ಮಾ][1]ಡಿದನಾ ಕಳ- ।
ಶಯೋನಿ ನೆಗ*ೞ್ದಿಂದ್ರಸುತನಿನೇಗುಂದಿದನೋ! ॥ ೧೯ ॥

ತಪನಸುತಂ ಬೇಱಾಂ ಬೇ- ।
ಱೆ ಪೊಲ್ಲದಂ ನುಡಿದನಾ[2] [ವಗಂ ಬಿಸುಟಂ ರ- ॥
ಕ್ಷಿಪ ಕಯ್ದುವನೆನಲಾ][2] ಮುಱೆ – ।
ಯುಪಾಂಡವಂ ಬಗೆದು ನೋೞ್ಪೊಡಶ್ವತ್ಥಾಮಂ ॥ ೨೦ ॥

ಗೆಲಲಾರ್ಪೊರ್ ಬಿಱಿದು ಗೆಲ್ವುದು ।
ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ ॥
ಗೆಲಲುಂ ಸಾಯಲುಮಾಱದೆ ।
ತೊಲಗಿದೊಡೆ ನೆಗೞ್ತೆ [3]ತೊಲಗದಿ [ಕರ್ಣಮ][3] ಮಯ್ಯಂ ॥ ೨೧ ॥

ಸೆರಗಂ ಬೆಱಗಂ ಬಗೆಯದೆ ।
ಪೊರೆಯಿಲ್ಲದೆ [4][ಕಲಿಯ ದಂಡಯುಂ ನೂಂಕಿದಪ್ರೋಲ್ ][4] ॥

1 ತೇಜಸ್ವಿಯನಂತಾ 1 – ಮು.ಪು.ಪಾ.

2 ತಸಂ ಬಿಸುಟಿಂ ತಕ್ಷಿಪ ನುಡಿಯು ನುಡಿವನೆ 2 ಮು.ಪು.ಪಾ.

3 ತೋಱುಗುಮೆ ಸಿರಿಮೆಯ್ಯಂ 3– ಮು.ಪು.ಪಾ.

4 ಕಲಿಯ ದಂಡೆಯುಂ ನೂಂಕಿದಪ್ರೋಲ್ 4 ಸ್ತ್ರೀ.ಪಾ. ಅ.ಪ್ರ. ೬ ೧೧೪

4 ಕಲಿಯ ದಂಡೆಯುಂ ತೂಂಕಿದಪ್ರೋಲ್ 4 ಮು.ಪು.ಪಾ.

ಪೊರೆದಾಳ್ದನ ಕಾರಣದಿಂ ।
ಪರಿಹರಿಪ್ಪುದು ಭೃತ್ಯನರ್ಥಮಂ ಪ್ರಾಣಮುಮಂ ॥ ೨೨ ॥

ಕರವಾಳಂ ಮಸೆವಂದದೆ ।
ಮುರವಾಳಂ ಮಸೆಯೆ ಕೂರಿತಕ್ಕುಮೆ ಕಲಿಯುಂ ॥
ಪೊರೆದೊಡೆ ಕೂರ್ಪರ್ಗಂ ತೋರ್ಪರ್ಗಂ ।
ತಿರೆ ತೋರ್ಕರ್ಣನೆ ಪಂದೆ ಪತಿಗೆ ಸಂಗರದೆಡೆಯೊಳ್ ॥ ೨೩ ॥

ತುಱು[ಗೋಳೊಳ್]¹ ಪೆಣ್ಬುಯ್ಯಲೊ ।
ಳಱಿವೆಸದೊಳ್ ನಂಟನೆಡೆಯೊಳೂರಱಿವಿನೊಳಂ ॥
ತಱಿಸಂದು ಗಂಡುತನಮನೆ ।
ನೆಱಪದವಂ ಗಂಡನಲ್ಲನಂತುಂ ಷಂಡಂ ॥ ೨೪ ॥

ಎಂದರಸನವರ್ಗೆ ವಿರಸಮಾಗಿ ಪರುಷಂನುಡಿಯೆ ಸಂಜಯಂ ತನ್ನಂತರ್ಗತದೊಳ್ —

ನೆಗೞ್ದೇ*ಕಾದಶರುದ್ರನಾದಿಪುರುಷಂ ದೇವಂ ಲಲಾಟೇಕ್ಷಣಂ ।
ನಗರಾಜಪ್ರಿಯನಂದನಾಪ್ರಿಯತಮಂ ದ್ರೋಣಂಗೆ ಕಾರ್ಯಾರ್ಥದಿಂ ॥
ಮಗನಾದಂ ಸ್ಮರಘಸ್ಮರಂ ದಯೆಯಿನಶ್ವತ್ಥಾಮನೆಂದೆಂದೊಡಾ ।
ತ್ರಿಗತಂ ಸತ್ತ್ವದಿನೇಂ ಪರೀಕ್ಷಿಪನೊ ಪಿಂಗಾಕ್ಷಂ ವಿರೂಪಾಕ್ಷನಂ ॥ ೨೫ ॥

ಪಗೆ ಚಿತ್ರಾಂಗದನುಯ್ಯಲ್ ।
ಗಗನದೊಳುಱೆ ತನ್ನ ತಂದ ಬಾಂಧವಕೃತಮಂ ॥
ಬಗೆಯದಹಿತಮನೆ ಬಗೆದಂ ।
ಪ್ರಗದಿ ಕರ್ಣನೆ ಪೋಗಿ ಕೌರವಂ ರೌರವಮಂ ॥ ೨೬ ॥

ಕಾರ್ಯಸಖಂ ಶಕುನಿ ಗಡಾ ।
ಶೌರ್ಯಸಖಂ ಸೂತಜಂ ಗಡಾ ಭೀಷ್ಮಶರಾ ॥

1 [ಗಳವೊಳ್]1—ಮು. ಪು. ಪಾ.

ಚಾರ್ಯರ ನುಡಿ [1][ಕಯ್ಪು][1] ಗಡಮ— ।
ಕಾರ್ಯಾಂಗಚಿಕಿತ್ಸಂಗೆ ವಿಧಿವಿಳಸನದಿಂ ॥ ೨೭ ॥

ಗುರು ಕವಚಂ ಕರ್ಣಂ ಬಾ— ।
ಣರಕ್ಕೆ ಸುರಸಿಂಧುನಂದನಂ ಸೀಸಕವಾ— ॥
ಗಿರೆ ಮೆಯ್ಗೆ ಮುಳಿಯಲಱಿಯದೆ ।
ಕುರುರಾಜನ ಕೂಡೆಯುನುಡಿವೆನೆಂದಂ ಭೀಮಂ ॥ ೨೮ ॥

ಧೃತರಾಷ್ಟ್ರಂ ದ್ರುಮಮಾದುದು ।
ಶತಶಾಖಂ ಪಂಚಶಾಖಮಾದುದು ಪಾಂಡು ॥
ಕ್ಷಿತಿರುಹಮುಕ್ಷಯಮಾಯ್ತು ।
ದ್ವಿತೀಯಮಾಯ್ತೇಕಶಾಖಮಿವನಿಂದಾದ್ಯಂ ॥ ೨೯ ॥

ಎಂದು ಸಂಜಯಂ ಕುರುರಾಜನಂ ನೋಡಿ—

ಭುವನಕ್ಕಾರಾಧ್ಯನೆಂಬೀ ನೆಗಳ್ತೆ* ಬಿರುದಿನಂಕಕ್ಕೆ ತಕ್ಕಂದದಿಂ ಭಾ— ।
ರ್ಗವನೊಳ್ ದಿವ್ಯಾಸ್ತ್ರಮಂ ಮುಂಪಡೆದು ನೆಗಳ್ತೆ* ಶೌರ್ಯಕ್ಕೆ ತಕ್ಕಂದದಿಂ ಪಾಂ— ॥
ಡವರುಂ ಕೌರವ್ಯರುಂ ಕೈಮುಗಿಯೆ ನೆಗಳ್ತೆ* ಪೆಂಪಿಂಗೆ ತಕ್ಕಂದದಿಂ ಜಾ— ।
ಹ್ನವಜಂ ಗಾಂಡೀವಿಯೊಳ್ ಕಾದಿದನವರ ಶರಾಸಾರಮಂ ನೀಡೆ ಕಂಡ್ಯಾ ॥ ೩೦ ॥

ಇದು ದಲ್ ಗಂಗಾತ್ಮಜನ್ಮಕ್ಕನುಗುಣಮಿದು ರಾಜಪ್ರಸಾದಕ್ಕೆ ಪ್ರೀತ— ।
ಕ್ಕುದಿದೀ ದೋರ್ದಂಡಕಂಡೂಯನಕಿದು ಸದೃಶಂ ಕಲ್ತ ಬಿಲ್ವಿನ್ನಣಕ್ಕಂ— ॥
ತಿದು ಯುಕ್ತಂ ಭೀಷ್ಮನಾಮಕ್ಕಿದು ಸಮುಚಿತಮೆಂಬಂತೆ ಸಂಗ್ರಾಮರಂಗೋ ।
ನ್ಮದ[2]ರೆಲ್ಲರ್ ನೋಡೆ ಪೆಂಪಂ[2] ಕದನದೊಳಡಟಂ ತೋಱಿದಂ ಸಿಂಧುಪುತ್ರಂ ॥ ೩೧ ॥

ಕಳಶನದೀಜರ್ ಭಕ್ತಿಗೆ ।
ಕಳಶಾರೋಪಣಮಿದೆನಿಸಿ ನೆಱಪಿದರವರೊಂ— ॥

1 [ತಪ್ಪು] 1 ಮು.ಪ್ರ.ಪಾ.
2 ಮತ್ತಂ ನೋಡೆ ಪಾರ್ಥಂ2 ಮು. ಪ್ರ. ಪಾ.

ದಳವಲ್ತು ಕಾದಿ ಗೆಲಲಾ- ।
ರಳವಲ್ಲರ್ಜುನನ ಶೌರ್ಯಮಂ ಪೇಸಜೇಯಾ ॥ ೩೨ ॥

ಅಂಚಿತ್ರಾಂಗದನುಮೈ ಭಾನುಮತಿ ಬಂದಾಕ್ರಂದನಂಗೆಯ್ಯೆ ಧ ।
ರ್ಮರತಂ ತಮ್ಮನ ಪೇಱೆ ಧರ್ಮತನಯಂ ಪಿನ್ನಂ ಸಭೋಮಾರ್ಗದೊಳ್ ॥
ತರಸಿಶ್ರೇಣಿಯೊಳಂದು ತಂದನದನಾರ್ಗಂ ಮೊಗ್ಗೆ [ಕೃಷ್ಣಾಸ್ವಯಂ- ।
ವರಮುಕ್ತ್ಯೈಷು] ವರಪ್ರಕಾಶಿತಧನುರ್ವಿದ್ಯಾಗುಣಂ ಫಲ್ಗುಣಂ ॥ ೩೩ ॥

ನೃಪ ಪಿನ್ನಂ ಪಿಡಿದುಮೈ ಭಾನುಮತಿಯಂ ಸಂತೈಸಿ ಚಿತ್ರಾಂಗದಂ- ।
ಗುಪಯೋಗಾಸ್ತ್ರಮನೆಚ್ಚು ಕೂಡೆ ಸಭದಿಂ ಗಾಂಡೀವಿ ತಪಾರ್ಗಳೇ ॥
ಕೃಪನೀ ಸೈಂಧವನೀ ಸರಿತ್ತನಯನೀ ರಾಧೇಯನೀ ಮದ್ರಭೂ- ।
ಮಿಪನೀ ಕುಂಭಜನೀ ಕುರುಪ್ರಭವರಂದೇಂ ಹಮ್ಮೃದಂಬೋದರೇ ॥೩೪॥

ಪರಿದಿಜೇದಂತಕನೊಳ್ ಸಾ- ।
ರ್ವರ ಪಿಳ್ಳೆಯ ಪೋದ ಜೀವಮಂ ತಂದಂ ಬಂ- ॥
ದರಿಮೆ ಶಿಖಿಗಿತ್ತನಾ ಸ ।
ಚ್ಚರಿತಂ ಭುಜಬಲದೆ ಪಾಂಡವಂ ಖಾಂಡವಮಂ ॥ ೩೫ ॥

[1][ಕೇತೂಕೃತಾಂಜನೇಯಂ][1] ।
ಸೂತೀಕೃತಹರಿವರಪ್ರಸಾದಂ ಮದನಾ- ॥
ರಾತಿಕೃತಾಸ್ತ್ರಂ ಪಿತೃಪುರು- ।
ಹೂತಂ ಕೃತಿಪೂರ್ಣತಾಕೃತಾರ್ಥಂ ಪಾರ್ಥಂ ॥ ೩೬ ॥

ಬಿಟ್ಟಿಡೆಗಿತ್ತ ಲಂಕೆಯ ವಿಭೀಷಣನಿತ್ತ ಕುಬೇರನಕ್ಕಿ ತಂ- ।
ದೊಟ್ಟಿದ ಪೊನ್ನ ರಾಶಿಗಳನಿತ್ತು ಧರಾಮರ*ರ್ಗಂದು ತಂದೆ ಪೇ- ॥

೨—೩೫— ಹೋ. ನೋ— ಪಂ. ಭಾ. ೬--೨.

1 ಕೇತುಕೃತಾಂಜನೆತನಯಂ1 ಮು. ಪು. ಪಾ.

ಟ್ಟಿದ ರಾಜಸೂಯಮುಮನಂ ತಪಮಿಲ್ಲದೆ ಬೇಳ್ದ ಬೀರಮಂ ।
ನೆಟ್ಟನೆ ನೀನೆ ಕಂಡಿಱಿಸಲಕ್ಕುಮೆ ಗಾಂಡಿವಿಯಂ ಸುಯೋಧನಾ ॥ ೩೭ ॥

ಮೃಡನೊಳ್ ಪಾಶುಪತಾಸ್ತ್ರಂ ।
ಬಡೆದಂ ತ್ರಿದಶಾಧಿಪತಿಯೊಳರ್ಧಾಸನಮಂ ॥
ಪಡೆದಂ ನಾರಾಯಣನೊಳ್ ।
ಪಡೆದಂ ಗಾಂಡಿವಿ ಸುಭದ್ರೆಯಂ ಭದ್ರಮನಂ ॥ ೩೮ ॥

ಕಲಿ ಪನ್ನೊಂದಕ್ಷೋಹಿಣಿ ।
ಬಲಮೆಲ್ಲಮನೊಂದೆ ರಥದೊಳೊರ್ವನೆ ಗೆಲ್ದಂ ॥
ಗೆಲಲರಿಯಂ ಗೋಗ್ರಹಣದ ।
ಕಲಹದೊಳೇಕಾಂಗವಿಜಯನಾದಂ ವಿಜಯಂ ॥ ೩೯ ॥

ಅಂತಕನುಮಿಂದ್ರನುಂ ಕಾ- ।
ಮಾಂತಕನುಂ ಭಾನುಸೂನುವುಂ ಕಳಶಜನುಂ ॥
ಶಂತನುತನೂಜನಾಜಿದೆ ।
ಕುಂತೀಸುತನಂ ಗೆಲಲ್ಕೆ ಪೆಱರಾರ್ತಪರೇ ॥ ೪೦ ॥

ಐದೊರೆಯಂ ಲಂಕಾಪುಟ ।
ಭೇದನಪಟುತರಕವಾಟಪುಟಭೇದನನಂ ॥
ತಾದೊರೆಯಣುವಂ ಪಱಿಯಿಗೆ ।
ಯಾದಂ ಗಾಂಡಿವಿಗೆ ಮಲೆವ ಗಂಡರುಮೊಳರೇ ॥ ೪೧ ॥

ಉರಗೇಂದ್ರಲೋಕಮಂ ಪೊ- ।
ಕ್ಕುರಗರೊಳಿಱಿದುರಗಪತಿಯ ನಿಜಸುತೆಯೊಡನಾ ॥
ದರದಿಂ ಜಯಲಕ್ಷ್ಮಿಯೊಳೊಡ- ।
ವೆರೆದಂ ಕೀರ್ತಿಯೊಳವೊಂದೆ ಪಸೆಯೊಳ್ ಪಾರ್ಥಂ ॥ ೪೨ ॥

ಅರಿ ಕೆಳೆ ಕೋಟಿಗ್ರಂ ಕೆಳೆ ವಿಷಾಹಿಕುಳಂ ಕೆಳೆ ಶತ್ರುಭೂಮಿಯೊಳ್ ।
ಗಿರಿಗಹನಂಗಳೊಳ್ ವಿಷಮ ರಾಕ್ಷಸಸಂಕುಲದೊಳ್ [1]ವರಾಹಸಿಂ- ।
ಧುರ[ಖ][1]ರಶಯ್ಯೆಯೊಳ್ ವಿಪುಳಭೀಕರದೊಳ್ ನಿಜಬಾಹುವಜ್ರಪಂ- ।
ಜರದೊಳಗಿಟ್ಟು ರಕ್ಷಿಸಿದನಲ್ತೆ ಸಹೋದರರಂ ವೃಕೋದರಂ ॥ ೪೩ ॥

ಪುಗೆ ಸೌಗಂಧಿಕವನಮಂ ।
ಪುಗಲೀಯದೆ ಪೊಣರ್ದ* [2]ಯಕ್ಷರಂ[2] ಯಮಪುರಮಂ ॥
ಪುಗಿಸಿ ಕನಕಾಬ್ಜಮಂ ತಂ ।
ದ ಗಂಧ[3]ನಾರಿ[3]ಪ್ರಚಂಡನಿಜಜೀವಿತೇಶಂಗಂ ॥ ೪೪ ॥

ಕಾನನದಿಂದಗಲ್ದ*ಂಬುಜ ।
ಕಾನನಮಂ ಬಿಟ್ಟು ಬಂದು ಸರಸತಿ ಸಿರಿ ತ ॥
ನ್ನಾನನದೊಳುರದೊಳಿರೆ ಚತು- ।
ರಾನನನುಂ ಕೃಷ್ಣನೆನಿಪನಿಜಜೀವಿತೇಶಂಗಂ ॥ ೪೫ ॥

ಬಕನಂ ಹಿಡಿಂಬನಂ ಕೀ- ।
ಚಕನಂ ಕಿರ್ಮೀರನಂ ಜಟಾಸುರನಂ ಕೊಂ- ॥
ದ ಕಲಿ ಜರಾಸಂಧನ ನಿ- ।
ಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳನೇ ॥ ೪೬ ॥

ನರಪತಿತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯುಂ ॥
ಪರಿಯಿಸಿ ಗೆಲ್ದು ನೊಟ್ಟಜೆಯ ಕಪ್ಪಮನಟ್ಟುವುದೆಂದು ಕೊಂಕಣೇ- ॥

---

1 ವರಾಹಸಿಂಧುರತರ2 ಮು. ಪು. ಪಾ.

2 ಧೀರರಂ2 ಮು. ಪು. ಪಾ.

3 ನಾರೀ3 ಮು. ಪು. ಪಾ.

೨-೪೪- ಹೋ. ನೋ. ಪಂ. ಭಾ. ೮-೩೧

ಸ್ವರಸಸಿದಿರ್ಚಿಸಾಧಿಸಿದನಂಬುಧಿಸೀಮೆವರಂ ಸಿಮಿರ್ಚಿದಂ ।
ಧರೆಯುನದೇಕೆ ಕೇಳ್ದುದೇಯು **ಸಾಹಸಭೀಮನ ಸಾಹಸಂಗಳಂ** ॥ ೪೭ ॥

ಬಲವತ್ತುಂಗಕಳಿಂಗರಾಜಮದನಾತ್ರಂಗಸಿಂಹಂ, ಭುಜಾ- ।
[ರ್ಗ]ಲಸಂಚೂರ್ಣಿತವೀರಕೌರವಶತಂ ದುಶ್ಶಾಸನೋರಸ್ಸ್ಥಳೋ- ॥
ಚ್ಚಲದುಷ್ಣಾಂಬುಸಿಮಗ್ನಪೂರ್ಣಜಠರಂ ಕೋಪಾಗ್ನಿಮಗ್ನದ್ವಿಷ ।
ದ್ಬಲನಾವಂಗಮಸಾಧ್ಯನಾರ್ಗಮಧಿಕಂ **ಚಾಳುಕ್ಯಕಂಠೀರವಂ** ॥ ೪೮ ॥

ಗದ್ಯ ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್ **ಸಂಜಯವಚನವ್ಯಾವರ್ಣನಂ** ದ್ವಿತೀಯಾಶ್ವಾಸಂ ಸಂಪೂರ್ಣಂ ॥



## ॥ ತೃತೀಯಾಶ್ವಾಸಂ ॥

ಶ್ರೀಮದಮೃತಾಂಶುವಂಶ ।
ವ್ಯೋಮಾಮೃತಕಿರಣನಮರವಂದಿತಚರಣಂ ॥
ಭೀಮಭುಜದಳಿತರಿಪುನೃಪ ।
ಸಾಮಜನವದಾತಕೀರ್ತಿ **ಸಾಹಸಭೀಮಂ** ॥ ೧ ॥

ಎಂದು ಸಂಜಯಂ ಸಾಹಸಭೀಮನ ಸಾಹಸಂಗಳನಭಿವರ್ಣಿ[1]ಸುವಂ[1]—
ಸೆಗೞ್ದ* ಭಾರತಮಲ್ಲ [[2]ಶಕ್ರಸುತ][2] ಬಾಣಾಘಾತದಿಂ ಭೀಮಭೀ— ।
ಮಗದಾದಂಡವಿಘಾತದಿಂ ಕುರುನೃಪಾನೀಕಂ ಪಡಲ್ವಟ್ಟು ಬೀ— ॥
ೞಿಗೆಯೊಕ್ಕಲ್ಗೆಣೆಯಾಗಿ ಬಿೞ್ದ ಭಟರಿಂ ಬಿೞ್ದಶ್ವದಿಂ ಬಿೞ್ದ ದಂ— ।
ತಿಗಳಿಂದಂ ಜವನುಂಡು ಕಾಱಿದವೊಲಾಯ್ತತ್ತಂ ಕುರುಕ್ಷೇತ್ರದೊಳ್
॥ ೨ ॥

ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ ಪತ್ತು ಬಾಣಂ ಧನು— ।
ರ್ಗುಣದಿಂದಂ ಬಿಡುವಲ್ಲಿ ನೂಱು ಪರಿವಾಗಳ್ ಸಾಸಿರಂ ವೈರಿಮಾ—
ರ್ಗಣಮಂ ಭೇದಿಸುವಲ್ಲಿ ಲ[3]ಕ್ಕ[3] ನಡುವಾಗಳ್ ಕೋಟಿ ಸೇನಾಂಗದೊಳ್ ॥
ಗಣನಾತೀತಮಿದೆಂದೊಡೇನೊಗೞ್ವುದೋ* ಬಿಲ್ಬಲ್ಮೆಯಂ ಪಾರ್ಥನಾ ॥ ೩ ॥

ಜೆಟ್ಟಿಗಳುಗ್ರಾಶನಿಸಂ— ।
ಘಟ್ಟದೆ ಕೆಡೆವಂತೆ ಭೀಮಭೀಮಗದಾಸಂ— ॥
ಘಟ್ಟದೆ ಕೆಡೆದೊಡನೆ ಪಡ— ।
ಲ್ವಟ್ಟುವು ಕಾಳಿಂಗರಾಜಸಮರಗಜಂಗಳ್ ॥ ೪ ॥

ಪವನಜವದಿಂದಲದಿಱಿಯೆ ।
ಲವಣಾರ್ಣವವೀಚಿಚಯಮೆ ಕೆಡೆವಂತಿರೆ ಕೆಡೆ ॥

---

1 ಸಿ1 ಮು. ಪು. ಪಾ.
2 ಶಂತನುಜ2—ಮು. ಪು. ಪಾ.
3 ಕ್ಷ3 ಮು. ಪು. ಪಾ.

ದುವು ತಾಂ ಬಿಡೆ ಕಾಂಭೋಜಾ- ।
[ಶ್ವಪಿಸರವಾ] ಪವನಸುತಗದಾಸಂಹತಿಯಿಂ ॥ ೫ ॥

ರಥವಾಜಿಗಳೊಂದೆಸೆಯೊಳ್ ।
ರಥಂಗಳೊಂದೆಸೆಯೊಳುರುಳ್ದು* ಕೆಡೆದುವು ನೋಡಾ ॥
ರಥಚೋದಕರೊಂದೆಸೆಯೊಳ್ ।
ಪೃಥಾಸುತಪ್ರಥಿತಪೃಥುಗದಾಪ್ರಹರ[1][ಣದಿಂ][1] ॥ ೬ ॥

ಬಿಲ್ವಡೆ ಪಡಲಿಟ್ಟಂತೆ ಪ- ।
ತಲ್ವಡೆ ಕಡಿತಲೆಯು ಕೊಂತದಣಿಕಟ್ಟಿನ ತೆರಂ ॥
ಗಲ್ವೆರಸು ನೋಡೆನೋ[2]ಡ- ।
ಲ್ಕೆಲ್ವಾ[2]ದುವು ಪವನಜೋದ್ಗದಾಸಂಹತಿಯಿಂ ॥ ೭ ॥

ನರರಿಂ ನರರಂ ಹರಿಯಿಂ ।
ಹರಿಯುಂ ವರೂಥವುಂ ತದ್ವರೂಥದಿಂದಿಟ್ಟಸುಕ್ಕ ॥
ತ್ಕರಿಯುಂ ಪಡಲಿಟ್ಟಂತಿರೆ ।
ಮರುತ್ಸುತಂ ಮೋದಿ ತವಿಸಿದಂ ಪಾರ್ಬಲಮಂ ॥ ೮ ॥

ಕೆಲರಂ ನುಣ್ಣನೆ ನೊಣೆದಂ ।
ಕೆಲರಂ ಪಿಡಿದಡಸಿ ನುಂಗಿದಂ ಕುರುಕುಲರಂ ॥
ಕೆಲರಂ ಸೌಳನೆ ಸೀಳ್ದಂ ।
ಕೆಲರಂ ಮಾರುತಿ ಜವಂಗೆ ಬಾಣಸುಗೆಯ್ದಂ ॥ ೯ ॥

ಕೆಲರಂ ಕು[3]ಱು[3]ದಱಿದಱಿದಂ ।
ಕೆಲಂಬರಂ ಸಂಧಿಸಂಧಿಯುಂ ಪಱಿಂಡುರ್ಚಿದಂ ॥ ೨೮

1 ಣೆಯಿಂ1 ಮು. ಪು. ಪಾ.
2 ಡಿದರಿ2 ಮು. ಪು. ಪಾ.
3 ಜಿ3– ಮು. ಪು. ಪಾ.

ಕೆಲರಂ ದೆಸೆವಲಿಗೆಯ್ದಂ ।
ಕೆಲರಂ ಭುಜಬಲದಿನಱೆದು ಶಿಲೆಯೊಳ್ ಪೊಯ್ದಂ ॥ ೧೦ ॥

ಬಡಿಗೊಂಡು ಗೋಣಿಪಣ್ಣಂ ।
ಬಡಿವಂತಿರೆ ಪವನಸೂನು ಪೆಂಕುೞಿನಾಯಂ ॥
ಬಡಿವಂತಿರೆ ಪಾಱುಡುವಂ ।
ಬಡಿವಂತಿರೆ ಬಡಿದನನಿಬರಂ ಕೌರವರಂ ॥ ೧೧ ॥

ಕೆಲರಂ ಬೀಸಿಯುಮೊತ್ತಿಯುಂ ಪಿಡಿದುಮಾರ್ದಟ್ಟಿಂ ಗದಾದಂಡದಿಂ ।
ಕೆಲರಂ ಗುರ್ದಿಯುಮುರ್ದಿಯುಂ ತಿರುಪಿಯುಂ ತೇಡುಂ ಭುಜಾದಂಡದಿಂ ॥
ಕೆಲರಂ ಕುತ್ತಿಯುಮೊತ್ತಿಯುಂಪೊಣರ್ಚಿಯುಂಪೊಯ್ದುಂ ಧನುರ್ದಂಡದಿಂ ।
ಕಲಿ ಕಟ್ಟಾನೆ ಕಡಂಗಿ ಕೊಲ್ವತೆಱದಿಂ ಕೊಂದಂ ಮರುನ್ನಂದನಂ ॥ ೧೨ ॥

ಪ್ರಕಟಾಟೋಪದೆಪೊಯ್ದುಪೊಯ್ದುಶಿಲೆಯೊಳ್ ವೃಕ್ಷಂಗಳೊಳ್ಪೊರ್ದಿದೋ
ದಿ ಕರದ್ವೈತದೆ ಗುರ್ದಿಗುರ್ದಿ ಕಠಿನಾಂಗಂ ನುಗ್ಗುನುಗ್ಗಪ್ಪಿನಂ ॥
ಬಕನಂ ಬಾಹುಮದಾವಳಂಬಕನನುದುರ್ [ದುರ್]ಗ್ರವಿದ್ಯುತ್ಕದಂ– ।
ಬಕನಂ ವೈರಿಗಜೇಂದ್ರನಂ ಬಸಕನಂ ಕೊಂದಂ ಮರುನ್ನಂದನಂ ॥ ೧೩ ॥

ದೆಸೆದೆಸೆಗೀಡಾಡಿದ ಕರಿ ।
ದೆಸೆಯಾನೆಗಳಬ್ಧಿಯೊಳಗೆ ಸೀರಾನೆಗಳಾ– ॥
ಗಸದೊಳಮುವಭ್ರಗಜಮೆನೆ ।
ಪೊಸತಾಗಿರೆ ಭಿನ್ನಸೃಷ್ಟಿವಡೆದನೊ ಭೀಮಂ ॥ ೧೪ ॥

ಸುತಪಕ್ಷಪಾತದಿಂದಂ ।
ಕೃತಾಂತನುಱೆ ಬರ್ಚಿದಂತೆ ಕೊಂದಂ ಕುರುಭೂ– ॥
ಪತಿಯ ಬಲಮೆಲ್ಲಮಂ ಧ– ।
ರ್ಮತನೂಜಂ ಭರದಿನಿಕ್ಕಿದಂ ಭುಜಬಲದಿಂ ॥ ೧೫ ॥

ಪವನಸುತಂ ಗದೆಗೊಳೆ ಗಾಂ– ।
ಡಿವಿ ಬಲ್ಗೊಳೆ ಕಯ್ದುಗೊಳ್ವ ನಾಕರ್ಗಳ್ವದಟರ್ ॥

ಭುವನದೊಳಿಲ್ಲ*ವರ್ಗಳ ಬಾ- ।
ಹುವಿಕ್ರಮಂ ಸಿಸಗೆ ಪೊಸತೆ ಕೌರವರಾಜಾ ॥ ೧೬ ॥

ಜವನ ಮುಳಿಸವನ ಮುಳಿಸೆನೆ ।
ಜವನೇ ಬೞಿದಪೊಲಿಂತು ಕು[1]ಱು[1]ದಱಿದಱಿದಂ ॥
ಜವನಂ ಮುಳಿಯಿಸಿ ಸುಭಟರ ।
ಜವನಂ ಮುಳಿಯಿಸಿ ಬ*ರ್ದುಂಕುವನ್ನರುಮೊಳರೇ ॥ ೧೭ ॥

ಯಮರಾಜಂತಂದೆ ಭೋಜಪ್ರಭವೆತನಗೆತಾಯ್ ಮಯ್ದುನಂ ವಾಸುದೇವಂ।
ಸಮರಕ್ರೀಡಾರ್ಥದಭ್ಯರ್ಥನೆಯಮಳನುಜರ್ ಸಂದ ಭೀಮಾರ್ಜುನರ್ ಕೋ- ॥
ಪಮವಂದ್ಯಂ ಚಾಪವಿದ್ಯಾಗುರು ಕಳಶಜನೆಂದಂದು ಸಾಮಾನ್ಯನಲ್ಲಂ ।
ಹಿಮಕೃದ್ವಂಶಾವತಾರಂ ಭರತಕುಲಶಿರಶ್ಶೇಖರಂ ಧರ್ಮಪುತ್ರಂ ॥ ೧೮ ॥

ದಾನಂ ಪ್ರಿಯವಾಕ್ಸಹಿತಂ ।
ಜ್ಞಾನಮಗರ್ವಂ [1]ಕ್ಷಮಾ[1]ನ್ವಿತಂ ಶೌರ್ಯಮೆನಿ- ॥
ಪ್ಪೀ ನುಡಿಯನೆ ನುಡಿಯಿಸಿದುದು ।
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ ॥ ೧೯ ॥

ಅಮ*ಳ್ಗಳ್ ವಿನಯದೆ ವಿಕ್ರಮ- ।
ದಮ*ಳ್ಗಳವರ್ ಮುಳಿಯೆ ಗಂಡರಿಲ್ಲವರ ಪರಾ- ॥
ಕ್ರಮಮಂ ನೀನಱಿದಿರ್ದುಂ ।
ಸಮರದೊಳಿಱಿಸುವುದೆ ಕುರುಕುಲಾಂಬರಭಾನೂ ॥ ೨೦ ॥

ಅಂದು ಕುಶಸ್ಥಲಂ ಜತುಗೃಹಜ್ವಲನಕ್ಕೆ [ಜಯಂತಮಂತೆ] ಕಾ- ।
ಳಿಂದಿ ವೃಕನಳಂ ವಿಷದ ಲಡ್ಡುಗೆಗಾದುದು ವಾರಣಾವತಂ ॥

1 ಱಿ 1 ಮು. ಪು. ಪಾ.
2 ಕೃಪಾ 2 ಮು. ಪು. ಪಾ.

ಸಂದ ಸಭಾಪ್ರತಾರಣಕೆ ಕಾರಣಮೆಂದಱಿಪಲ್ಕೆ ಬೇಡಿದರ್ ।
ಸಂಧಿಗೆಯುಳ್ಕೆ ಬೇಡಿದರೆ ಪಾಂಡುತನೂಭವರಯ್ದು ಬಾಡಮಂ ॥ ೨೦ ॥

ಅತಿಲಜ್ಜಾನ್ವಿತನಾ ನದೀಜನಧಿಕಕ್ರೋಧಾವಹಂ ದ್ರೋಣನು ।
ದ್ಧತಕೌರವ್ಯಕೃತಾಟ್ಟಹಾಸಮುಸುಹೃದ್ವೀರಾವತಾರಂ ಪೃಥಾ ॥
ಸುತರಾರೋಪಿತಚಾಪರುದ್ಧತರುಮಾಗಾಂಡೀವಿಯುಂ ಭೀಮನುಂ ।
ಪತಿಗಳ್ ನೋಟ್ಟಿಸಮೂಯ್ತು ನಿನ್ನನುಜನಿಂ ಕೃಷ್ಣಾಂಬರಾಕರ್ಷಣಂ
॥ ೨೧ ॥

ಎಂದು ನುಡಿದ ಸಂಜಯನ ನುಡಿಗೆ ಫಣಿರಾಜಕೇತನಂ ಪಿಡಿಲ್ದು—

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ ।
ಪರನೆಂದೆಲ್ಲರ ಪೇಟ್ಟ ಮಾತು ಪುಸಿಯಾಯ್ತೆ ಕಾರ್ಮುಕಾಚಾರ್ಯನಂ ॥
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಂದಾ ಮೃಷಾಪಾತಕಂ ॥
ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ ॥೨೩॥

ತನಗೆ ಹತೋಶ್ವತ್ಥಾಮೋ ।
ಯೆನಲಕ್ಕುಮೆ ಯಮಪುರಕ್ಕೆ ಗುರು ಪೋಪೆಡೆಯೊಳ್ ॥
ಘನಕುಂಜರ ಎಂದೆಂಗುಮೆ ।
ಜನರಂಜನೆಗಱಿಯಲಾದುದಿಲ್ಲಱಿಮಗನಂ ॥ ೨೪ ॥

ಈದೊರೆಯಱಿಮಗನುಂ ಮೃಷ- ।
ವಾದಂ ನೋಡೆಂದು ಧರ್ಮನಂ ಮೂದಲಿಸಲ್ ॥
ಪೋದಂ ಪುತ್ರನನಱಸಲ್ ।
ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ ॥ ೨೫ ॥

ಕಳಶಜನನಿಂತು ಕೊಲಿಸಿದ ।
ಖಳನೆ ಗಡಂ ಧರ್ಮನಂದನಂ ಕ್ರೂರಧಿನಂ- ॥
ಗಳ ಪೆಸರಂ ಮಱೆಯಿಸಿ ಮಂ- ।
ಗಳವಾರಂ ಕಷ್ಟವಾರಮೆಂಬಂತೆ ನಲಂ ॥ ೨೬ ॥

ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ- ।
ಗನೆ ಭಗದತ್ತನಾನೆ ಬರಿಯೆಲ್ವುದಿವನ್ನೆಗಮೊತ್ತೆ ಗಂಡನಾ- ॥
ಗನೆ ಕೊಲಲೊಲ್ಲದಂಗಪತಿ ಬಿಲ್ಲೊಳೆ [1]ಕೊಂಡೆ[1] ಬಿಟ್ಟಲ್ಲಿ ಗಂಡನಾ- ।
ಗನೆ ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ ॥ ೧೭ ॥

ಒಡವುಟ್ಟಿದರಂ ಕೊಂದವ- ।
ರಡಗಂ ತಿಂದವರ ನೆತ್ತರಂ [2]ಬಿಲಗಸೆಯೊಳ್[2] ॥
ಕುಡಿವೀ ನಿಸ್ತ್ರಿಂಶತೆಯಂ ।
ಹಿಡಿಂಬಿಯುಂ ಪೊರ್ದೆ ಕಲ್ತನಾಗನೆ ಭೀಮಂ ॥ ೧೮ ॥

ಎನಗಾ ಜೂದಿನೊಳಗ್ರಜಾನುಜಸಮೇತಂ ಗಂಡುಡೊಱ್ತಾಗಿ ಕಾ- ।
ನನದೊಳ್ ವಲ್ಕಲಧಾರಿಯಾಗಿ ಹರನೊಳ್ ದಿವ್ಯಾಸ್ತ್ರಮಂ ಬೇಡ ಬೆ- ॥
ಳ್ಳನದಿಂ ತಾಪಸನಾಗಿ ಪೇಡಿಯೆನೆ ಮತ್ಸ್ಯಾವಾಸದೊಳ್ ವಾಸುದೇ- ।
ವನನಂಟಂ ನಟನಾಗಿ ಬಾರದ ಭವಂ ಬಂದಂ ಪೃಥಾನಂದನಂ ॥ ೧೯ ॥

ಮೊಱೆ ಯಮಪುತ್ರನಿರ್ದಿರವು ವಾಯುಜನಿರ್ದಿರವಗ್ನಿಪುತ್ರಿಯಿ- ।
ರ್ದಿರವಮಳರ್ಕಳಿರ್ದಿರವು ಮತ್ಸ್ಯನಿವಾಸದೊಳೆಲ್ಲಮಂತೆ ಮೆ- ।
ಯ್ಗರೆದಿರೆ ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿ- ।
ರ್ದಿರವುಮನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪಮೋ
॥ ೨೦ ॥

ಗುರುವಂ ದ್ವಿಜನ್ಮನಂ ಸುತ- ।
ವಿರಹಾಗ್ನಿಗ್ರಸ್ತನಂ ನಿರಾಯುಧನಂ ಸಂ- ॥
ಹರಿಸಿದ ಶಕ್ರಸುತಂಗಾ ।
ಗುರುವಧಮೆ ಯಶೋವಧಕ್ಕೆ ಕಾರಣಮಲ್ತೇ ॥ ೨೧ ॥

1 ಕೋದೆ1 ಮು. ಪು. ಪಾ.

2 ಬಿಸಲಗೆಯೊಳ್2 ಮು. ಪು. ಪಾ.

ಯಮವಾಯುತ್ರಿದಶಾಶ್ವಿನೀತನಯರುಂ ತಾವಾದರೀಯುಗ್ಮರುಂ ।
ಓಮಕೃದ್ವಂಶಕಳಂಕರಂತವರ್ಗೆ*ವಾ ಪಾಂಚಾಲಭೂಪಾಲಪು- ॥
ತ್ರಿ ಮನೋವಲ್ಲಭೆಯಾದಳೆಂದೊಡೆ ಗಡಂ ಕೇಳಲ್ಕದೇಂ ಕ್ಷತ್ರಧ ।
ರ್ಮವೊ ಭೂಲೋಕಕೆ ಪೇೞಿಮೊ ದೊರೆಯ ಚಾರಿತ್ರಂ ಪೃಥಾಪುತ್ರರಾ
॥ ೩೭ ॥

ಪಸೆಯೊಳ್ ಪಸುರ್ವ*ಂದರೊಳ- ।
ಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯರೆ ದೋಷ- ॥
ವಸಥರ್ ಪಾದರದಿಂ ಜನಿ- ।
ಯಿಸಿದರ್ ಪಾಂಡವರೊಳಲ್ಲದೆವ್ರೊಳವುಂಟೇ ॥ ೩೮ ॥

ಎಂದು ಧೃತರಾಷ್ಟ್ರನಂದನಂ ಧರ್ಮನಂದನನುಮಂ ವಾಯುನಂದನನುಮಂ ಸಂಕ್ರಂದನನಂದನನುಮನಶ್ವಿನೀನಂದನರುಮಂ ನಿರಾಕರಣಂಗೆಯ್ವನಿತಱೊಳಂ ಮಾಣದೆ—

ಬಿಡದಾರಾಧಿಸೆ ಮುನ್ನಮೆ ।
ಕುಡಲಾಱದೆ ಬೞಿಕೆ ಗಂಟಲಂ ಮೆಟ್ಟಿದೊಡಿ- ॥
ಟ್ಟೆಡೆಯೊಳ್ ಕೊಟ್ಟಂ ಗೆಲ್ಲಂ- ।
ಗುಂಡುವಂತೆ ನರಂಗೆ ಪಾಶುಪತ[1]ಮನ[1] ರುದ್ರಂ ॥ ೩೯ ॥

ತನಯನೆನಗೆಂದು ಮನ್ನಿಸಿ ।
ತನಗುರುಗಜ್ಜ[2]ಕ್ಕೆ[2] ಪಾಕಶಾಸನನರ್ಧಾ- ॥
ಸನಮೇಱಿಸಿ ನೀಱೆಱಿಸಿ ।
ಮನುಜಂಗಂ ಮಾನ್ಯಪದವಿಯಂ ಮಾಡಿದನೇ ॥ ೪೦ ॥

ಪವನಂಗೆ ಪುಟ್ಟಿದಂ ರಾ- ।
ಘವನಱುಗಾಳ್ ತ್ರಿಣಯನಾಂತಮಿಸಿಪಣಿನಂ ಪಾಂ- ॥

1 ಮಂ1- ಮು. ಪು. ಪಾ.
2 [ಮಿನಿ] 2 ಮು. ಕೃ. ಪಾ.

ಪವನಕೇತುದಂಡದೊಳ್ ನೆಲೆ- ।
ಸುಪ್ರಮಾಣಗ್ರಕ್ಕೆ ಕಪಿಗೆ ಚಪಲತೆ ಸಹಜಂ ॥ ೪೧ ॥

ಅನುಜೆಯನಿತ್ತು ನರಂಗಾ- ।
ತನ ತನಯಂಗಿತ್ತು ತನ್ನ ಮಗಳಂ ತಾನಾ- ॥
ತನ ರಥಮನೆಸಗಿ ಧರ್ಮಜ ।
ನನುಜನ ನೆವದಿಂದಮರಸುಗೆಯ್ವಂ ಕೃಷ್ಣಂ[1] ॥ ೪೨ ॥

ಪುರುಷರ್ ಮೂವರೊಳೂರ್ಜಸೆಂಬರಸುರಪ್ರಧ್ವಂಸಿಯೆಂಬರ್ ಜಗ ।
ದ್ಗುರುವೆಂಬರ್ ಪೂಜೆ*ಗರ್ಕೆ ತೀರದೆನಸಂ ಧರ್ಮಾನುಜಂಗೇಕೆ ಕಂ- ।
ಕರನಾದಂ ಕರವೇಟಮಾದನದಱಂ ಸೂತಂ ಭಟಂ ಪೇೞ್[2]ಮೆಂ[2] ।
ಬರ ಮಾತೊಪ್ಪುಗುಮಾದಿ ದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ ॥ ೪೩ ॥

ಅನಿಮೇಷಾದ್ಯವತಾರಂ ।
ತನಗಾ[3]ಗೆ[3]ದಶಾವತಾರ[4]ಮನಿತಱೊಳಿರದ[4] ॥
ಜರ್ನನನ ರಥಮೆಸ[5]ಗಿ[5] ಪನ್ನೊಂ- ।
ದನೆಯುದು ಸೂತಾವತಾರಮುಂ ಹರಿಗಾಯ್ತೇ ॥ ೪೪ ॥

ಎಂದು ದುರ್ಯೋಧನಂ ಹರನುಮಂ ಪುರಂದರನುಮಂ ಕಪಿರಾಜನುಮಂ ಕಂಜೋದರನುಮಂ ನಿರಾಕರಣಂಗೆಯ್ದು ನಿತಱೊಳಂ[6] ಮಾಣದೆ[6] ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು—

1 ನನೀಮಂದಿಂದರಸುಗೆಯ್ಯ(=ಯ್ವ?)ನಾಗನೆ ಕೃಷ್ಣಂ 1 - ಮದ್ರಾಸು ಪ್ರತಿಯ ಪಾಠಾಂತರ.
2 ಯೆಂ 2 ಮು. ಪು. ಪಾ.
3 ಯ್ತು. 3 ಮು. ಪು. ಪಾ.
4 ಮಲ್ಲದೊಡಿರದ 4 ಮು. ಪು. ಪಾ.
5 ಪ 5—ಮು. ಪು. ಪಾ.
6 ಮಾಣ್ಬು ಸೈರಿಸಲಾಱದೆ 6 ಮು. ಪು. ಪಾ.

ಪ್ರತಿಕೂಲದೈವಮೆ ನೀಂ ।
ಪ್ರತಿನೃಪರನುಕೂಲದೈವಂ ಸಹಾಯನೆ ನೀಂ ॥
ಪ್ರತಿನೃಪರಸಹಾಯರ್ ನೀಂ ।
ಪ್ರತಿಬಲದಱಿಂದನರ್ಥಕಂ ವಾಕ್ಯಾರ್ಥಂ ॥ ೪೫ ॥

ಎಂದು ನುಡಿದ ಸಂಜಯನ ನುಡಿ[1] ಕರ್ಣಕಠೋರವಾಗೆ ದುರ್ಯೋಧನನದರ್ಕೆ[1] ನಿರ್ವೈಸಿ,—

ಸಮರಜಯಂ ದೈವಾಯ— ।
ತ್ತಮದಱಿನಾ ಪುರುಷಕಾರಮುಮಗಾಯಿತ್ತಗಳ್ ॥
ಯಮನಂದನಾದಿಗಳೊಳೊಂ— ।
ದೆ ಮೆಯ್ಯೊಳಾಂತಿಱಿವೆನೆನ್ನ ಚಲಮಂ ಮೆಱೆವೆಂ ॥ ೪೬ ॥

ಸುರಸಿಂಧೂದ್ಭವ ಕುಂಭಜನ್ಮ ದಿನಕೃತ್ಪುತ್ರಾದಿಗಳ್ ಸಾಯೆ ಸಂ ।
ಗರದೊಳ್ ಪಾಂಡವರಂ ಗೆಲಲ್ [2]ನೆಱೆದನಿಲ್ಲೇ[2] ಕಾಕಿ ದುರ್ಯೋಧನಂ ॥
ಸೆರಗಂ ಸಾರ್ದಪನೆಂಗುಮೊ ಧರೆ ಭುಜಾದಂಡಂ ಗದಾದಂಡಮುಂ— ।
ಬೆರಸುಂ ಸಂಜಯ ಮಜ್ಜಯ[3]ಕ್ಕೆ ದಪಿರಲ್ ಮತ್ತನ್ಯರಂ ಪಾರ್ವನೇ[3] ॥ ೪೭ ॥

ಮದವತ್ಕರಿಗಳ ಭಿದುವಂ ।
ವಿದಾರಣಂಗೆಯ್ವು ಕೊಲ್ವ ಕಂಠೀರವಕಂ ॥
ಕದನದೊಳರಿನೃಪರಂ ಕೋ— ।
ಪದೆ ಕೊಲ್ವನಗಂ ಸಹಾಯಮೆಂಬುದುಮೊಳದೇ ॥ ೪೮ ॥

ಕೞಿದರ್ ಕರ್ಣಾದಿಗಳಿ— ।
ನ್ನುೞಿದುದನಾನಾಸೆಗೆಯ್ವೆನೆನಗಂ ನೆರಮೇ ॥

1 ಗೆ ದುರ್ಯೋಧನಂ ನಿರ್ವೈಸಿ 1 ಮು. ಪು. ಪಾ.

2 ನೆಱೆಯನಿನ್ನೇ 2 ಮು. ಪು. ಪಾ.

3 ಕ್ಕೆ ನೆರವಿಂ ಮತ್ತಾರ್ನೆರಂಬಾರ್ವನೇ 3 ಮು. ಪು. ಪಾ.

ಗಟೀಗೆಗೆ ಕರಡೆಯ ತಾಳದ ।
ಪಟಿವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ ॥ ೪೯ ॥

ಎಂದು ನುಡಿದು ಕಾಲದಂಡಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು [1]ಪಾಂಡವರ್ಗ[1]ಭಿಮುಖನಾಗಿ ನಡೆವ [2]ಪನ್ನಗಪತಾಕನನಮುಳಿಸಿಸಂದವನಜಿದು[2]ಸಂಜಯನಂಜದೆಮಾಕೊರ್ಂಡು

ನರನುಂ ನರನಂದನನುಂ ।
ಗುರುವುಂ ಗುರುಸುತನುಮಾರ್ಯಭೂರಿಶ್ರವನುಂ ॥
ಸುರಸಿಂಧುಸುತನುಮಿಂತಱಿ-
ವರುಮತಿರಥರಲ್ತೆ ಕುರುಕುಲಾಂಬರಭಾನೂ ॥ ೫೦ ॥

ಅನಿಲಜನುಂ ಧೃಷ್ಟದ್ಯು- ।
ಮ್ನನುಮಂತಕತನಯನುಂ ಮಹಾಸಾತ್ಯಕಿ ಮ- ॥
ತ್ಸ್ಯನ ಸೂನು ಶಿಖಂಡಿ ವ್ಯಾ- ।
ಸನ ಮತದಿಂದಱುವರುಂ ಮಹಾರಥರಲ್ತೇ ॥ ೫೧ ॥

ಇನನಂದನನುಂ ದುಶ್ಶಾ- ।
ಸನನುಂ ವೃಷಸೇನನುಂ ಘಟೋತ್ಕಚನುಂ[3]ಮ- ॥
ತ್ರಿನ್[3]ನಕುಳನುಮಾಸಹದೇ- ।
ವನುಮರ್ಧರಥರ್ಕಳಿವರ್ಗಳಜಿವಾ ನೃಪತೀ ॥ ೫೨ ॥

ಕುರುರಾಜ ನೀನುಮಾಮ- ।
ದ್ರರಾಜನುಂ [ಸೋಮದತ್ತನುಂ] ಕೃಪಕೃತವ- ॥
ರ್ಮರುಮೊಡನೆ ಶಕುನಿಯುಂ ಕೂ- ।
ಡಿರೆ ಸಮರಥರೆಂಬರಲ್ತೆ ಸಿಮ್ಮಱಿವರುಮಂ ॥ ೫೩ ॥

1 ಸಮರಾ 1 ಮು. ಪು. ಪಾ.
2 ಫಣಿರಾಜಕೇತನನಂ 2 ಮು. ಪು. ಪಾ.
3 ನಚ್ಚಿನ 3 ಮು. ಪು. ಪಾ.

ಪವನಾತ್ಮಜಂ ಮಹಾರಥ- ।
ನವನಿಪ ನೀಂ ಸಮರಥನೆ ಅದರ್ಕಧಿಕನೊಳಾ ॥
ಪವನಾತ್ಮಜನೊಳ್ ಮಱೆ ಬ- ।
ದ್ಧವೈರಮಂ ಸಂಧಿಮಾೞ್ಪುದುತ್ತಮಪಕ್ಷಂ ॥ ೫೪ ॥

ಎಂದು ನುಡಿದ ಸಂಜಯನ ನುಡಿಗೆ ಪಿಂಗಾಕ್ಷನತಿವಿಷಮಪರುಷ ವೇಷಾವೇಶಧರನಾಗಿ—

ಅತಿರಥನಾತಂ ಗಡ ಬಲ ।
ಯುತ ಸಮರಥನೆನ್ನೊಳಧಿಕಬಲವಂತಂ ಮಾ- ॥
ರುತಿ ಗಡ ಮಹಾರಥಂ ಮಾ- ।
ರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ ॥ ೫೫ ॥

ಪೆಱರಂ ಪೊಗೞ್*ಪೆಯೆಮ್ಮಂ ।
[1] ಕಿಱಿಯರ್ [1] ಮಾಡಿದಪೆಯೆಲವೊ ಸಂಜಯ ನೀನುಂ ॥
ಪೆಱನೊರ್ವಂ ಬಿಲ್ಲೋಜಂ ।
ಪೆಱನೊರ್ವಂ ಸಿಂಧುಪುತ್ರನಾಗಲ್ ಬಗೆವೋ ॥ ೫೬ ॥

ನಿನ್ನ ಮಹಾರಥನಳವುಮ- ।
ನೆನ್ನಳವುಮನಱಿಯದಿೞಿಸಿ ಸಮರಥನೆಂದಯ್ ॥
ಮುನ್ನಂ ನಿನಗಾಂ ಪೊಸತೇ ।
ಪನ್ನಗಕೇತನನೊಳಾಂಪ ಗಂಡರುಮೊಳರೇ ॥ ೫೭ ॥

ಅಂತು ನರಮಾಂಸಮುಂ ಮಹಾಮಾಂಸಮೆಂದು ನರತೈಲಮುಂ ಮಹಾತೈಲಮೆಂದು ನರಮಾಂಸಬಲಿಯುಂ ಮಹಾಮಾಂಸಬಲಿಯೆಂದು ದೀರ್ಘನಿದ್ರೆಯುಂ ಮಹಾನಿದ್ರೆಯೆಂದು ದೀರ್ಘಪ್ರಾಣಮುಂ ಮಹಾಪ್ರಾಣಮೆಂದು ಸ್ನುಹಿವೃಕ್ಷಮುಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ

---

1 ಕಿಱಿಯಂ 1 ಮು. ಪ್ರ. ಪಾ.

ಮಹಾರಥನೆಂದು ನುಡಿಯಲ್ ತಕ್ಕುದೇವಲಂ! ಎಂದರಸನವಂಗೆ ವಿರಸನಾಗಿ ಪರುಷಮಂ ನುಡಿಯೆ ಸಂಜಯನಂಜಿ—

ಎನಿತೆನಿತಂ ಕಲಿಸಿದೊಡಂ— ।
ತನಿತನಿತುಂ ನೈಜಭಾವಮುಕ್ಕುಂ ನೃಪನಂ— ॥
ದನನೆಂತುಮಂತು ಕರ್ಕಶ ।
ತನುವಂತಃಶೂನ್ಯಮುಕ್ಕಮುನ್ನತವಂಶಂ ॥ ೫೮ ॥

ಎಂದಱಿದು "ಮೌನಂ ಸರ್ವಾರ್ಥಸಾಧನಂ" ಎಂಬುದು । ಈತಂಗನುಕೂಲವೃತ್ತಿಯುಂ ಸ್ವಚ್ಛಂದಾನುವೃತ್ತಿಯುಮಾಗಿ ನೆಗೞ್ಗೆ ಎಂತುಂ "ಆರಾಧ್ಯಂ ನ ಪ್ರಕೋಪಯೇತ್" ಎಂದು ಮೋನಂಗೊಂಡು ಸಂಜಯಂ ಕಿಱಿದುಬೇಗಮಿರ್ದು ಫಣಿರಾಜಕೇತನಂ ಯುದ್ಧಸನ್ನದ್ಧನಾಗಿ ನಡೆವುದಂ ಕಂಡು ಮತ್ತಮಾ ಸಂಜಯಂ ನಿಸರ್ಗಮೂರ್ಖನುಂ ಸ್ವಭಾವದೃಢನುಂ ಸ್ವಾಮಿಹಿತನುಮಪ್ಪುದಱಿಂದಿರಲಾಱದೆ—

ಬಲದೊಳಗಶ್ವತ್ಥಾಮಂ ।
ಬಲನೊಳ್[1][ರಿ][1]ರ್ವರುಮನಾಸೆಗೆಯ್ಯದೆ ವಿದ್ಯಾ ॥
ಬಲದಿಂ ಕಾದಿದೆ ನಿಜಭುಜ ।
ಬಲದಿಂ ಪಾಂಡವರೊಳರಸ ಕಾದಲ್ ಬಗೆದಯ್ ॥ ೫೯ ॥

ಆ ಬಲದೇವಾಶ್ವತ್ಥಾಮರುಮಿರ್ದರವರಿರ್ವರುಮಲ್ಲದೆ ಕೃಪಕೃತವರ್ಮರುಮಿರ್ದರಂತು ಸಾಲ್ವರೊಳೊರ್ಬಂಗೆ ವೀರಪಟ್ಟಮಂ ಕಟ್ಟಿ ವೀರಪ್ರಮುಖಂಗೆ ಸೇನಾಪತ್ಯಾಭಿಷೇಕಮಂ ಮಾಡಿ ಪಗೆಯಂ ಕಯ್ಗೆ ಮಾೞ್ಪುದೆಂಬುದುಂ ಸಂಜಯನ ನುಡಿಗೆ ದುರ್ಯೋಧನನಿಂತೆಂದಂ—

ತ್ರಿದಶನದೀಸುತನಿಂ ತೀ— ।
ರದ ಕಜ್ಜಂ ಮುನ್ನೆ ಕಳಶಸಂಭವನಿಂ ತೀ— ॥

1 ನಿ1–ಮು. ಪು. ಪಾ.

ರದ ಕಜ್ಜವಿನಜನಿಂ ತೀ– ।
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ ॥ ೬೦ ॥

ದ್ರೋಣನೆಮಗೊಳ್ಳಿಕೆಯ್ದಂ ।
ದ್ರೋಣನ ಸುತನೊಳ್ಳಿಕೆಯ್ಯದಿರ್ಕುಮೆ ಸಮರ ॥
ಕ್ಷೋಣಿಯೊಳಿನ್ನವನಾಸೆ[ಯೆ?] ।
ಮಾಣೆಯಣಂ ಕಯ್ಪಿಸೊರೆಯ ಕುಡಿಯೋಂ ಮಿಡಿಯೋಂ ॥ ೬೧ ॥

ಹಲಿಯಂ ರಣಕೇಳಿಕುತೂ– ।
ಹಲಿಯಂ ನಚ್ಚಿರ್ದೆ ನಿವನುಮಾಹವಕೋಲಾ– ।
ಹಲದಲ್ಲಿ ತೀರ್ಥಯಾತ್ರಾ– ।
ಚ್ಛಲದಿಂದಮಗಲ್ದು ಪೋದನಿನ್ನುಂ ಬಾರಂ ॥ ೬೨ ॥

ಮಡಿ[1][ವೊಡೆ][1] ಪಗೆ ರವಿಸುತನಿಂ ।
ಮಡಿಗುಂ ಮೇಣ್ ಶೌರ್ಯಶಾಳಿದುಶ್ಶಾಸನನಿಂ ॥
ಮಡಿಗುಂ ಮೇಣೆನ್ನಿಂದಂ ।
ಮಡಿಗುಂ ಪೆಱಪೆಱರಿನೆನ್ನ ಪಗೆ ಮಡಿದಪುದೆ ॥ ೬೩ ॥

ನಿಲಲುಂ ನೂಂಕಲುಮರಿಯಂ ।
ಗೆಲಲುಂ ಪೆಱರೊಳರೆ ಕರ್ಣನಲ್ಲದೆ ಕರ್ಣಂ ॥
ತಲೆನಾಯಕನಾರುಮವಂ ।
ನಿಲೆ ನಿಲ್ವರ್ ನೂಂಕೆ ನೂಂಕುವರ್ ಗೆಲೆ ಗೆಲ್ವರ್ ॥ ೬೪ ॥

ಕಡುಗೂಱಿತಕ್ಕುಮುಕ್ಕಿನೊ– ।
ಳೊಡಗೂಡಿದ ಪಚ್ಚೆ ಬೇಱೆ ಕೂರ್ಪಿಲ್ಲಾರುಂ ॥
ತೊಡರ್ದಿ*ಱಿವರರ್ಕನಂದನ– ।
ನೊಡನಿಲ್ಲದೆ ತಾಮೆ ಬೇಱೆ ಕೂಱಿದರೊಳರೇ ॥ ೬೫ ॥

1 ಯದೆ1–ಮು. ಪು. ಪಾ.

ಕಾನೀನಂ ದ್ರೋಣನದೀ।
ಸೂನುಗಳಿಱಿದಿಂಬಱಿಕ್ಕೆ ಪೆಜರೆನಗಿಲ್ಲಿಂ- ॥
ದಾನೆ ಗಳಿತಾಶ್ರುಜಲದಿಂ।
ಸೇನಾಪತ್ಯಾಭಿಷೇಕಮಂ ಮಾಡಿದಪೆಂ ॥ ೬೬ ॥

ಎನಗಿರ್ವರುಮೆರಡುಂ ತೋ- ।
ಳೆನಗಿರ್ವರುಮೆರಡು ಕಣ್ಗ[1][ಳ್][1]ನ್ನರೆ ಯುವರಾ- ॥
ಜನುಮಂಗರಾಜನುಂ ಪೋ- ।
ಱೆನೆ ಸಂಜಯ ಮತ್ತಮೆನಗೆ ಮಾನಸಮಾಱೆ ॥ ೬೭ ॥

ಕಱಿದಂ ದಿನಕರತನಯಂ।
ಕಱಿದಂ ಯುವರಾಜನಪ್ಪ ದುಶ್ಶಾಸನನುಂ ॥
ತುಱಿಲಾಳ್ಗಳನಿರ್ವರುಮಂ।
ಕಱಿಪಿ ಸುಯೋಧನನ ಬಾೞ್ವುದಂ ನಂಬಿದಿರೇ ॥ ೬೮ ॥

ಎನಗೆ ಮನೆಯಿಂದು ಶೂನ್ಯಂ ।
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ- ॥
ವನಿ ಶೂನ್ಯಮಾಯ್ತು ದುಶ್ಶಾ- ।
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ॥ ೬೯ ॥

ಬಾಂಧವರನಿಱಿಸಿ ಸರಸಿಜ।
ಬಾಂಧವತನಯನುಮನೆನ್ನ ತಮ್ಮನುಮಂ ನ- ॥
ಮ್ಮಂಧನರೇಂದ್ರನ ಮೊಗಮಂ।
ಗಾಂಧಾರಿಯ ಮೊಗಮನಾವ ಮೊಗದೊಳ್ ನೋೞ್ಪೆಂ ॥ ೭೦ ॥

ಎನೆ ಸಂಜಯನಾ ಪ್ರಸ್ತಾವದೊಳ್ ಭೀಷ್ಮದ್ರೋಣಕರ್ಣ ದುಶ್ಶಾಸನಶಲ್ಯಶಕುನಿಸೈಂಧವಭೂರಿಶ್ರವಸ್ಸೋಮದತ್ತಭಗದತ್ತಸೌಬಲ

1 ಳ್ 1 –ಮು. ಪು. ಪಾ.

ಬೃಹದ್ಬಲಬಾಹ್ಲೀಕವಿಂದಾನುವಿಂದಾದಿಗಳ ಸಾವಿನೊಳ್ ಸರ್ವಾಂಗವಿ
ಕಳರಾಗಿರ್ದ ಧೃತರಾಷ್ಟ್ರಗಾಂಧಾರಿಯರ ಚರಣಾರವಿಂದವಂದನಂಗೆಯ್ದು
ದೇವರ ಮನಃಕ್ಷತಮನಾಜಿಸಲ್ವೇಟ್ಟುದು ಬೀಡಿಂಗೆ ಬಿಜಯಂಗೆಯ್ವುದೆನೆ

ಪವಣದೆ ಗುರುಜನದಲ್ಲಿಗೆ ।
ಯುವರಾಜನುಮಂಗರಾಜನುಂ ಬೆರಸು ರಣೋ ॥
ತ್ಸವದಿಂ ಪೋಗಲ್ ನಾಣ್ಚುವೆ- ।
ನವರಿರ್ವರುಮಿಲ್ಲದೀಗಳಲ್ಲಿಗೆ ಪೋಗಲ್ ॥ ೨೧ ॥

ಮಹಿಭೂಭೃಚ್ಛತ್ರಶೂನ್ಯಂ ಕನಕಮಹಿಧರಂ ದ್ರೋಣವೃಕ್ಷಾದಿಶೂನ್ಯಂ ।
ಗುಹೆ ಸಿಂಹಾನೀಕಶೂನ್ಯಂ ದೆಸೆ ದಿಗಿಭಘಟಾಶೂನ್ಯಮಾದಂತೆ ವಾಯು-॥
ಸ್ಪೃಹಭೀಮೋದ್ದಾಮಬಾಹಾಬಲದಳಿತಕುಭೃದ್ವರ್ಗಶೂನ್ಯಂ ವಿಷಾದಾ- ।
ವಹಮಕ್ಕುಂ ಮುನ್ನಮೆನ್ನಿರ್ಪ ಜೀಕೆಯ ಸಭೆ ಮತ್ತೆಂತದಂ ಪೊಕ್ಕು
ನೋಟ್ಟೆಂ ॥ ೨೨ ॥

ಪತಿಶೋಕವಿಕಳಪಾರ್ಥಿವ ।
ನಿತಂಬಿನೀಜನಮನೀಕ್ಷಿಸಲ್ ಸಂಜಯ ಲ- ॥
ಜ್ಜಿತನೆನ್ನಿರ್ಪಿರವಿಂದೇ - ।
ಕೆ ತೋರ್ಪೆನಾನೆನ್ನ ಮೊಗಮನತಿದುಃಖಿತನೆಂ ॥ ೨೩ ॥

ಎಂಬನ್ನೆಗಂ ಸಕಲಚತುರಂಗಬಲವಿಕಳನಾಗಿ ಸಪ್ತಾಂಗರಾಜ್ಯಸ
ಮಾಲಿಂಗಿತನಾಗಿ ಸಂಗ್ರಾಮರಂಗದೊಳಿರ್ದನೆಂಬುದನಾಪ್ತಚರರಱಿಪೆ
ಕೇಳ್ದು ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾಕುಲೀಕೃತಚಿತ್ತರಾಗಿ
ತಮ್ಮ ಮಗನನಾರಯ್ಯಲುಂ ಮನಃಕ್ಷತಮನಾಜಿಸಲುಮೆಂದಜಸುತ್ತುಂ
ಬಂದು—

ಪಡೆ ಪನ್ನೊಂದಕ್ಷೋಹಿಣಿ- ।
ಗೊಡೆಯನೆ ಮೂರ್ಧಾಭಿಷಿಕ್ತನಯ್ ಮೂಜಂ ಬಿ- ॥

ಳ್ಗೊಡೆಯ ನಡುವಿರ್ಪ ನೀನಿ– ।
ರ್ದೆಡೆಯುಮ[1][ದೆ] ಮಗುಳಿಯದಂತುಟಾದುದೆಮಗನೇ
‖ ೭೪ ‖

ಎಂದು ಪಳಯಿಸುತ್ತುಂ ಬರ್ಪ ಗುರುಜನದ ಸರಮಂ ಸಂಜಯನಱಿದು ಕರಕಮಲಮುಕುಳಿತಾಂಜಲಿಯಾಗಿ ದೇವಾ ನಿಮ್ಮಲ್ಲಿಗೆ ನಿಜಜನನೀಜನಕರಱಸುತ್ತುಂ ಬಂದರ್ ಎಂಬುದುಂ ಉದ್ಧೃತಗೋತ್ರಾಭಿಮುಖಂ ವಜ್ರಾಘಾತವಾದಂತೆ ಸಿಗ್ಗಾಗಿ ತಲೆಯಂ ಬಾಗಿ—

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯ[2]ತ್ರಯಂ[2]ಪ್ರೋಗ್ರ ಸೋ– ।
ದರರುಂ ಮಕ್ಕಳುಮಾಪ್ತರುಂ ಬೆರಸು ಬಂದಾನಂದದಿಂ ಕಾಣ್ಬೆನಂ– ॥
ದಿರಲಿಂತಾಯ್ತು ವಿಧಾತ್ರ ಮದ್ಗುರುಗಳಂ ದುಃಖಾತ್ಮರಂ ಶೋಕತ– ।
ಪ್ತರಂ ಮೆಯ್ಯೊಳೆ ಬೀಳ್ವದಶ್ರುಮುಖರಂ ಕಾಣ್ಬಂತುಟಂ ಮಾಡಿದಯ್
‖ ೭೫ ‖

ಕಂದ ನಿಜಾನುಜರೆಲ್ಲಿದ– ।
ರಿಂದೆನ್ನಂ ಜನನಿ ಬಂದು ಬೆಸಗೊಂಡೊಡದೇ– ॥
ನೆಂದು ಮಱುಮಾತುಗುಡುವೆಂ ।
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ‖ ೭೬ ‖

ಶೋಕಂ ಮಿಗೆ ಫಣಿರಾಜಪ– ।
ತಾಕಂ [3]ವಿಗಳಿತವಿವೇಕನವಿರಳ[3]ಬಾಷ್ಪೋ– ॥
ದ್ರೇಕಂ ಹಾ ದುಶ್ಯಾಸನ ।
ಹಾ ಕರ್ಣಾ ಎನುತುಮಂತೆ ಮೂರ್ಛೆಗೆ ಸಂದಂ ‖ ೭೭ ‖

---

1 ನೆ 1 –ಮು. ಪು. ಪಾ.

2 ಸ್ವನಂ 2 –ಮು. ಪು. ಪಾ.

3 ವಿಕಳಿತ ವಿವೇಕಶೂನ್ಯಂ3 ಮು. ಪು. ಪಾ.

ಅಂತು ಮೂರ್ಛಾಪ್ರಸಂಗಸಾದ ಪನ್ನಗಪತಾಕಂಗೆ ಶಿಶಿರೋಪಚಾರ ಕ್ರಿಯೆಗಳಂ ಮಾಡ್ಪಿ ಸಂಜಯುಸಿರವಂ ತತ್ಪರಿಜನಂ ಕಂಡು ಪೇೞೆ ಗಾಂಧಾರಿ ಮನದೊಳಳ್ಳಿಬಳ್ಳಿ ನಸೆಕೊನೆವೋಗಿ—

ಮೃಗಧರಕುಲಲಕ್ಷ್ಮೀವ- ।
ಲ್ಲಿಗೆ ಪೆಱರಾರ್ ಸೀನೆ ಮುನ್ನಡರ್ಪೆನಲಿರ್ದಯ್ ॥
ಮಗನೆ ಲಯಕಾಲಭೀಮೋ- ।
ರಗನುರಗಪತಾಕ ನಿನ್ನುಮಂ ನುಂಗಿದನೇ ॥ ೭೮ ॥

ಏಮಗಂಧಯುಷ್ಟಿಯಾಗಿ- ।
ರ್ದೆ ಮಗನೆ ನೀನುಳ್ಳೊಡಲ್ಲಮೊಳವೆಂದಿರೆ ನಿ- ॥
ನ್ನುಮನಿರಿಸದೆ ಕುರುವಂಶಾ- ।
ನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ ॥ ೭೯ ॥

ಗುರುಚರಣಂಗಳ್ಗೆಱಗದೆ ।
ಪರಕೆಯನಾದರದಿನಾಂತುಕೊಳ್ಳದೆ ಮೋನಂ- ॥
ಬೆರಸಿರ್ಪುದು ನಿನಗುಚಿತಮೆ ।
ಗುರುವಿನಯಮನೇಕೆ ಮಱೆದೆ ಕುರುಕುಲತಿಲಕಾ ॥ ೮೦ ॥

ಮಡಿದೀ ದುಶ್ಶಾಸನನೇಂ ।
ನುಡಿಯಿಸುವನೊ ಕುರುನರೇಂದ್ರ ದುರ್ಮರ್ಷಣನೇಂ ॥
ನುಡಿಯಿಸುವನೊ ದುಷ್ಕರ್ಣಂ ।
ನುಡಿಯಿಸುವನೊ ನೀನುಮುಸಿರದಿರ್ಪುದೆ ಮಗನೆ ॥ ೮೧ ॥

ಎಂದು ಗಾಂಧಾರಿ ವಿಪ್ರಲಾಪಂಗೆಯ್ಯೆ ಧೃತರಾಷ್ಟ್ರಂ ಸಕಲರಾಷ್ಟ್ರ ರಾಜಕಿರೀಟಕೋಟಿತಾಡಿತಚರಣಾರವಿಂದದ್ವಂದ್ವನೆನಿಸಿದ ತನ್ನ ನಂದನನ ಕಾಲಮೇಲೆ ಕವಿದುಬಿಬ್ದು—

ಹಾ ಕುರುಕುಲ ಚೂಡಾಮಣಿ ।
ಹಾ ಕುರುಕುಲಚಕ್ರವರ್ತಿ ಹಾ ಸಕಲಧರಿ- ॥

ಶ್ರೀಕಾಂತ ನಿನ್ನುಮಂ ಪರ- ।
ಲೋಕಕ್ಕಟ್ಟಿದನೆ ಕಾಯ್ದು ಮಾಯ್ದ ವಿಧಾತ್ರಂ ॥ ೮೨ ॥

ಭವದೇಕಶೇಷಮಾದುದು ।
ಯುವರಾಜಾದಿಗಳ ಸಾವು ನಿಂ ಕಾದದೆ ಕೌ- ॥
ರವನಾಯಕ ನಿಶ್ಶೇಷಂ ।
ಭುವನಮಶೇಷಂ ಬಿಟೆಕ್ಕೆ ಶೇಷಂಗೆ ಭರಂ ॥ ೮೩ ॥

ಎಂದು ಕರುಣಾಕ್ರಂದನಂಗೆಯ್ದು ಗುರುಜನಂಗಳ ಸರಮುಂ ಸಂಜಯನುಂ ಮಾಣಿಸಿ ಕರ್ಣದುಶ್ಶಾಸನಾದಿಗಳ ಸಾವಿನೊಳ್ ಶೋಕೋದ್ರೇಕದಿಂ ಮೂರ್ಛಾಗತನಾಗಿರ್ದ ಪತಿಗಳೆ ಚೇತರಿಸುಗುಮನ್ನೆಗಂ ವಿಪ್ರಲಾಪಮನುಪಸಂಹರಿಪ್ಪುದೆನೆ ಸಮಾಹಿತಾಂತಃಕರಣರುಮಾಗಿ

ಕುರುಕುಲಚೂಡಾಮಣಿ ನಿಜ ।
ಗುರುಗಳ ನಯನಾಂಬು ತಳಿವ ಜಲಮಾಗಿರೆ ತ- ॥
ದ್ಗುರು[1]ಜನ[1]ದೀರ್ಘೋಚ್ಛ್ವಾಸಮೆ ।
[2]ಪರಿವೀಜನ[2]ಮಾಗೆ ಮೂರ್ಛೆಯಿಂದೆಚ್ಚತ್ತಂ ॥ ೮೪ ॥

ಅಂತು ಮೂರ್ಛೆಯಿಂದೆಚ್ಚತ್ತು ನಿಜಜನನೀಜನಕರಂ ಕಂಡು ಲಜ್ಜಾಭರದಿಂ ಶಿರಮನಾನತಂ ಮಾಡೆ ಸಂಜಯಂ ಧೃತರಾಷ್ಟ್ರಂಗಂ ಗಾಂಧಾರಿಗಂ ನಿಜತನೂಜನಪ್ಪ ರಾಜರಾಜಂ ಕುರುಕುಲಮಧ್ಯಮಹೀತಳಸಹಕಾರಭೂರುಹಂ ನಿಮಗೆ ವಿನಮಿತೋತ್ತಮಾಂಗನಾದನವಧರಿಸುವುದು ಎನೆ ತದೀಯವಚನಾಮೃತಸ್ಪರ್ಶನದಿಂದಾನಂದಚಿತ್ತರಾಗಿ ತಡವರಿಸಿಯುಂ ತಬ್ಬರಿಸಿಯುಂ ತೆಗೆದಪ್ಪಿಯುಂ ಮುಸಃಕ್ಷತಶರೀರನಂ ಪರಮಾಶೀರ್ವಚನಶತಸಹಸ್ರಂಗಳಿಂ ಪರಸಿ ಪುನಃಪುನರಾಲಿಂಗನಂಗೆಯ್ದು ತೆಱೆದಾನುಂ ಬೇಗದಿಂ ವಿಗತಪರಿಜನಂಮಾಡಿ—

1 ಗಳ 1 ಮು. ಪ್ರ. ಪಾ.

2 ಪರಿಘೋಷಮು2--ಮು. ಪ್ರ. ಪಾ.

ಯಮಸುತನಿಂಬುಕೆಯ್ವನೆಮಗಿನ್ನೊಡಂಬಡು ಕಂದ ಸಂಧಿಯಂ ।
ಸಮಗೊಳಿಸಲ್ಕೆ ಸಂಜಯನನಟ್ಟುವೆ ಭೀಮನೊಳಾದ ಬದ್ಧವೈ- ॥
ರಮನುಱಿ ನೋಡದಿರ್ ಸುತಸಹೋದರದುಃಖಮನೀವ್ರದರ್ಥರಾ- ।
ಜ್ಯಮನವರ್ಗೆಂದು [1][ಕಾಲ್ವಿಡಿದು][1] ಬೇಡಿದನಂಧನೃ[2][ಪಂಸ್ವಪುತ್ರನಂ][2]
॥ ೮೫ ॥

ಅಂತು ಕುರುನರೇಂದ್ರನನಂಧನರೇಂದ್ರನಭ್ಯರ್ಥಿಸಿ—

ಅರಿಭೂಭೃದ್ಬಲಮಂ ಪಡಲ್ವಡಿಸಿ ಗೆಲ್ದೇಕಾಂಗವೀರಂ ಜಟಾ- ।
ಸುರಕಿರ್ಮೀರಹಿಡಿಂಬಕೀಚಕಜರಾಸಂಧರ್ಕಳಂ ಕೊಂದ ಭೀ- ॥
ಕರಶೌರ್ಯಂ ಕಡುಕೆಯ್ದು ನಿನ್ನನುಜರಂ ಕೊಂದಿಕ್ಕಿದಂ ಕೂಡೆ ಸೂ- ।
ರ್ವರುಮಂ ನಿನ್ನುಮನಿನ್ನದೇಕುೞಿಪುವಂ **ಚಾಳುಕ್ಯಕಂಠೀರವಂ** ॥ ೮೬ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲ ದೇವಶ್ರೀಪಾದಕಲ್ಪಪಾದಪಾಶ್ರಯಾ ಸನ್ನವರ್ತಿ ಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ **ಶ್ರೀಸಾಹಸಭೀಮ ವಿಜಯದೊಳ್ ಧೃತರಾಷ್ಟ್ರ ವಚನವ್ಯಾವರ್ಣನಂ** ತೃತೀಯಾಶ್ವಾಸಂ ಸಂಪೂರ್ಣಂ ॥



1 ಕೆಯ್ಮುಗಿದು1—ಮು. ಪು. ಪಾ.

2 ಪಾಲಪುತ್ರನಂ2—ಮು. ಪು. ಪಾ.

## ॥ ಚತುರ್ಥಾಶ್ವಾಸಂ ॥

ಶ್ರೀವನಿತೆಗೆ ನಿಜವಿಜಯ ।
ಶ್ರೀವನಿತೆಯುಂ ಸವತಿಯಾಗೆ ರಿಪುನೃಪರಂ ಬಾ- ॥
ಹ್ವಾವಷ್ಟಂಭದೆ ಗೆಲ್ದ ಜ- ।
ಯಾವಸಘನಸಾಧ್ಯನಲ್ತೆ **ಸಾಹಸಭೀಮಂ** ॥ ೧ ॥

ಅದಱಿನಾತನೊಳಪ್ಪ ಸಮರಾನುಬಂಧಮಂ ಮಾಣ್ಬುದೆನ್ನೆಂಬುದನಿಂ-
ಬುಕೆಯ್ವುದೆಂದ ಧೃತರಾಷ್ಟ್ರನ ನುಡಿಯಂ ಗಾಂಧಾರಿ ಸಮಭ್ಯರ್ಥಿಸಿ
ತಾನುಂ ಪ್ರಾರ್ಥಿಸಿ—

ಪರಿಣತವಯಸರಿಮಿರ್ಕ- ।
ಳ್ಗುರುಜನರೆಮಗಿಂಬುಕೆಯ್ವುದುಚಿತಂ ನಿನ್ನೀ ॥
ಗುರುನುಡಿದ ನುಡಿಗೊಡಂಬಡು ।
ಗುರುವಚನಮಲಂಘನೀಯಮೆಂಬುದು ಮಗನೇ ॥ ೨ ॥

ಸಮರವ್ಯಾಪಾರಂ ಮಾ- ।
ಣ್ದು ಮಗನೆ ನಿಜಶಿಬಿರದತ್ತ ಬಿಜಯಂಗೆಯ್ ನ- ॥
ತ್ತ ಮಗಂದಿರ್ ಸತ್ತರ್ ನೀ- ।
ನೆಮಗುಳ್ಳೊಡೆ ಸಾಲ್ವುದವರನಿಂ ತಂದಪೆವೇ ॥ ೩ ॥

ಎಂದು ಗಾಂಧಾರಿ ತನ್ನ ಪುತ್ತ್ರನ ಮಕ್ಕಳಂ ನೆನೆದು ದುಃಖಂ ಮರು-
ಕೊಳಿಸಿ ದುಃಖಂಗೆಯ್ಯೆ ಸಂಜಯಂ ಜಡಿದು—

ಪ್ರಿಯಸುತನಂ ಬಂದುಂ ಸಂ- ।
ತಯಿಸುವುದದುಗೆಟ್ಟು ನೀನೆ ಗಡ ಶೋಕಾಕ್ರಾಂ- ॥
ತೆಯುಮಾಗಿ ಶೋಕಿಸಲ್ ಸಂ- ।
ತಯಿಸುವರಾರಂಧನೃಪತಿಯುಂ ನೃಪತಿಯುಮಂ ॥ ೪ ॥

ಎಂಬುದುಂ ವೃದ್ಧರಾಜಂ ಕುರುರಾಜಂಗಭಿಮುಖನಾಗಿ

ವೀರಶತಜನನಿಗೀ ಗಾಂ- ।
ಧಾರಿಗೆ [1]ಶತದುಃಖ[1] ಜನನಿಪೆಸರಾಯ್ತೊಗಳ್ ॥
ಕೌರವಪತಿ ದುಃಖಮುಹಾ ।
ಭಾರಮನಾಂತಾಯುಸಕ್ಕೆ ಗುಱಿಯಾದುದಱಿಂ ॥ ೫ ॥

ಭವದನುಜಕ್ಷಯಮಂ ಧಾ- ।
ತ್ರೀವಲ್ಲಭಂ ಕಂಡು ಸಂಧಿಮಾಡಲ್ ಕಿಱಿಸಾ- ॥
ನಿವಹಂ ಬಗೆವಂ ಧರ್ಮಜ ।
ನವನಾಕೃತಕ ಪ್ರತಿಜ್ಞೆಯುಂ ಕೇಳ್ದಱಿಯಾ ॥ ೬ ॥

ಸಮರದೊಳದೃಷ್ಟವಶದಿಂ ।
ಸಮನಾಯುಂ ಸಾಯೆ ನಾಲ್ವರನುಜರೊಳೊರ್ವಂ ॥
ಯಮಭರನತೀತನಪ್ಪಂ ।
ಯಮನಂದನನದಱಿಂ ನೃಪಂ[2]ಗಂ ಜಯಮೇ[2] ॥ ೭ ॥

ಎಂದು ನುಡಿದ ನರೇಂದ್ರನ ನುಡಿಗೆ ಸಂಜಯನಿಂತೆಂಬುಟ್ಟು

[3][ಉಪಪತ್ತಿಯುಕ್ತಮಿದನಿಂ][3] ।
ನೃಪ ಕಯ್ಕೊಳ್ ನಿನ್ನ ತಂದೆಯೆಂದುದಿಸಿಸೆ ಭೂ- ॥
ಮಿಪನೆಂದಂ ನಿಮ್ಮಯ ಪೂ- ।
ರ್ವಪಕ್ಷಮೆಮಗಾದುದೇ ಮಱಿಂ ಸಿದ್ಧಾಂತಂ ॥ ೮ ॥

1 ದುಃಖಶತ1 ಮು. ಪು. ಪಾ.
2 ಸಂಶಯಮೋ2—ಮು. ಪು ಪಾ.
3 ನೃಪತಿಗೆ ಯುಕ್ತಂ ತಪ್ಪದು3—ಮದ್ರಾಸ್ ಪ್ರತಿಯ ಪಾಠ.
3 ನೃಪಪತಿಯುಕ್ತಮಿದಂನೀಂ3—ಮು. ಪು. ಪಾ.

ತನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲಬರ್ದಪೆಂ ।
ತನ್ನಸುವಂ ನಿವೇದಿಸುವನನ್ನಿಗೆ ಧರ್ಮತನೂಜನೆಂದೊಡಾ- ॥
ನನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲ ಬಾಳ್ಕೆಗಂ- ।
ಬೆನ್ನ ಬಿಯಾಸೆಯುಂ ಬಿಸು[1][ಟಿನಿ][1] ನ್ನವರಾದುದನಾಗಬಿರ್ಪೆನೇ ॥ ೯ ॥

ಸಾಧಿಸುವೆಂ ಫಲ್ಗುಣನಂ ।
ಸಾಧಿಸುವೆಂ ಪವನಸುತನ ಬಿಸಿಜೇಂ ದಾ ಕ- ॥
ರ್ಣಾ ದುಶ್ಶಾಸನ ತೆಗೆವೆಂ ।
ಸಾಧಿಸಿದಿಂ ಬಟಿಕೆ ಯಮಜನೊಳ್ ಪ್ರದುವಾಟ್ಟಿಂ* ॥ ೧೦ ॥

ಧರೆಯುಂ ಪೆಟ್ಟಲ್ಲಿರ್ ನಾಂ- ।
ಡುರಾಜನಂ ನೀನುಮದನೆ ಕೈತವದಿಂದ- ॥
ಯ್ವರ ಕೆಯ್ಯೊಳಿಟ್ಟುಕೊಂಡೀ- ।
ಕುರುರಾಜಂ ಮತ್ತ್ರಮದಗೆರ್* ಪ್ರದುಮತ್ತ್ರನನೆ ॥ ೧೧ ॥

ಆಮ್ಮೃಗನೆನಾಗೆ ಧರ್ಮಜ- ।
ನೀಮ್ಮೃಗನಲ್ಲನೆ ಬಟಿಕ್ಕೆ ನೀವುಂ ತಾನುಂ ॥
ನಿಮ್ಮೊಳ್ ನೇರ್ಪಡುಗಿಡದೆ ನು- ।
ಖಮ್ಮುಮ್ನಿನ ತೆಱದೆ ಬಾಟ್ವುದಾಂ ಬೆಸಕೆಯ್ವೆಂ ॥ ೧೨ ॥

ಬಿಡಿಮೆನ್ನನೆಂದು ಮುಂದಿ- ।
ರ್ದಡಿಗೆಱಗಿದ ಮಗನನಪ್ಪಿಕೊಂಡತ್ತ್ರುಜಲಂ ॥
ಗುಡುಗುಡನೆ ಸುರಿಯೆ ಸಾಲಗೆ ।
ತಡತಡವರಿ ನುಡಿದನಂಧನೃಪನಾ ಸ್ನುಪನಂ ॥ ೧೩ ॥

ನೀನೆಂತುಮೆಮ್ಮ ಪೇಟ್ವುದಂ ಕಯ್ಕೊಳ್ಳದೆ ವೈರಮನೆ ಕಯ್ಕೊಂಡು ಪಾಂಡುನಂದನರೊಳ್ ಕಾದಿದಲ್ಲದೆ ಸಂಧಿಯನೊಡಂಬಡೆಯಪ್ಪೆನಂ ನೀ

1 ಬಿಸು1-ಮು. ಪು. ಪಾ.

ನೆಮಗಿನಿತನೊಳ್ಳಿಕೆಯ್ಯಲ್ವೇೞ್ಪುದು ನೆಗೞ್ವ ಕಜ್ಜಮಾವುದುಮಂ ನಿಮ್ಮಜ್ಞನೊಳಾಲೋಚಿಸಿ ನೆಗೞ್ವುದು ಅಲ್ಲಿಗೆ ಬಿಜಯಂಗೆಯ್ವುದೆನೆ ಮಹಾಪ್ರಸಾದಮೆಂದದನೊಡಂಬಟ್ಟಂತೆಗೆಯ್ವೆನೆಂದು ನಿಜಗುರುಜನಮಂ ಬೀೞ್ಕೊಂಡು ಬೀಡಿಂಗೆ ಪೋಗಲ್ವೇೞ್ದು ಕಿಱಿದು ಪೊೞ್ತು ಶೋಕಾನುಬಂಧದೊಳ್ ಕೋಪಾನುಬಂಧಮುಂ ಸಮರಾನುಬಂಧಮುಮಂತರಿಸಿದರ್ಪ ಸಂಜಯದ್ವಿತೀಯನುಂ ನಿಜಭುಜಗದಾಸಹಾಯನುಮಾಗಿ ಸಂಗ್ರಾಮಭೂಮಿಯೊಳಗನೆ ಬರ್ಪಲ್ಲಿ—

ಉಡಿದಿರ್ದ ಕಯ್ದು ನೆತ್ತರ ।
ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾ- ॥
ಲಿಡಲೆಡೆವಡೆಯದೆ ಕುರುಪತಿ ।
ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ ॥ ೧೪ ॥

ಆಗಳದಂ ಕಂಡು—

ಪೆಣದಿನಿಗಳ ತಂಡಂ ಬ- ।
ಲ್ಪೆಣಗಳನೞಿಸುತ್ತುಮಲ್ಲಿ ಬರೆವರೆ ಸಾರ- ॥
ಲ್ಕಣವಿಱಾಯದೆ ತಮ್ಮಾಳ್ದನ ।
ಪೆಣನಂ ಕಾದಿರ್ದರಲ್ಲಿ [1]ಬಿಟ್ದಿ[1] ಭಟರ್ಕಳ್ ॥ ೧೫ ॥

ಅಂಧನೃಪಸುತನಯೋ ಜಾ- ।
ತ್ಯಂಧನಯೋ ಮೆಟ್ಟದಗ*ಲ್ದು ಪೋಗೆನುತುಂ ಕೋ- ॥
ಪಾಂಧರ್ ಜಡಿದರ್ ಪತಿಯ ಕ- ।
ಬಂಧಮನೆಡಗಲಿಸಿ ಪೋಪ ದುರ್ಯೋಧನನಂ ॥ ೧೬ ॥

ಹಲಚಕ್ರಾಂಕುಶರೇಖಾ ।
ವಿಲಸಿತಪದತಳಕೆ ಮಾಡೆ [2]ಪುನರು[2]ಕ್ತತೆಯಂ ॥

1 ಸಂತ1–ಮು. ಪು. ಪಾ.
2 ನವರ2–ಮು. ಪು. ಪಾ.

ಹಲಚಕ್ರಾಂಕುಶ[1][ವಾ ಕುರು ।
ಕುಲಜಂ][1] ಕುಸಿಕುಸಿದು ಮೆಲ್ಲಮೆಲ್ಲನೆ ನಡೆದಂ ॥ ೧೭ ॥

ಆಗಳದಂ ಕಂಡು ಸಂಜಯಂ ಗಳಗಳನೆ ಕಣ್ಣೀರಂ ನೆರಪಿ ಮನಸ್ಸ್ಫುಟಿತ ಕಂಠನುಮಾಗಿ—

ವಿನುತಶಿರೋಧಿಮಂಡಳಿಕಮೌಳಿ[2]ವಿರಾಜಿತ[2]ಪಾದಪೀಠಕಂ ।
ಜನಕಮುಖಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿಪಾಳದಂ ॥
ಜಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಕೆ ಸಂಯುಗಾ- ।
ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ ॥ ೧೮ ॥

ಎಂದು ಗಳಗಳನೆ [3]ಕಣ್ಣೀರಂ[3] ನೆರಪುವ ಸಂಜಯನನಭಿಮಾನಧನಂ [4]ಮಾಣಿಸಿ[4] —

ತನುಜಾನುಜರ ವಿಯೋಗದ ।
ಮನಃಕ್ಷತಂ ನೋಯಿಸಲ್ಕೆ [5]ನೆಱೆಯದೆ[5] ಸಮರಾ ॥
[6]ವನಿಜಾತಂ ಚರಣಕ್ಷತ- ।
ಮಿ[6]ನಿಸುಂ ನೋಯಿಸುಗುಮೆ ವಜ್ರಮನಸನ್ನಂ ॥ ೧೯ ॥

ಎಂದು ಕುರುಕು[7]ಲಾವಷ್ಟಂಭಂ ಕಾರ್ಯಾವಷ್ಟಂಭ[7]ನಾಗಿ ಬರುತ್ತುಂ —

1 ಕುರುಕುಲತಿಲಕಂ1—ಮು. ಪು. ಪಾ.
2 ವಿಘಟ್ಟಿತ2—ಮು. ಪು. ಪಾ.
3 ಕಣ್ಣನೀರಂ3—ಮು. ಪು. ಪಾ.
4 ಸುಯೋಧನಂ ಸಂತೈಸಿ4—ಮು. ಪು. ಪಾ.
5 ನೆಱೆಯುವು5—ಮು. ಪು. ಪಾ.
6 ನನಿಂತೊಳುದಿದಿರ್ದಕಯ್ಯುಗಳ6—ಮು. ಪು. ಪಾ.
7 ಲಮಾನಸ್ತಂಭಂ ಧೈರ್ಯಾವಷ್ಟಂಭ7—ಮು. ಪು. ಪಾ.

ಮೊನೆಯೊಳಿರಿದರ್ಕೆ ಸತ್ತಭಟನಂ ಗಜದೃಷ್ಟಿಯೊಳಿಣ್ಮೆ ಸತ್ತ ಬೀ- ।
ರನನಪಟಿಂ ಸಹಸ್ರಭಟರಂ ರಣದೋರ್ *ಪ್ರೋಣರ್ದಿಕ್ಕೆ ಸತ್ತ ಗಂ- ॥
ಡನನಜಸುತ್ತೆ ಬರ್ಪ ಸುರಸುಂದರಿಯರ್ಕಳನೀಕ್ಷಿಸುತ್ತುಮೊ- ।
ಯ್ಯನೆ ನಡೆದಂ ಪರಾಕ್ರಮನಿಕೇತನನಾ ಫಣಿರಾಜಕೇತನಂ ॥ ೨೦ ॥

ಇರಿ[1]ಬೆಸುಗೆಯೊಳಗೆ ಮೂವ- ।
ತ್ತೆರಡಾಯುಧವಲ್ಲಿ[1]ಬಿದ್ದ[1] ಭಟರಂ ವಿದ್ಯಾ- ॥
ಧರಕರಣದಿನುಯ್ವೆಡೆಯೊಳ್ ।
ಸುರೇಂದ್ರವಧು ಪೋಲ್ತ[2][ಳ್ಕಿ]ಂದ್ರಜಾಲಿ[ಕ][2]ವಧುವಂ ॥ ೨೧ ॥

ಅರುಣಜಲಾವಲಿ[3]ಪ್ತಿ[3] ಪೊಸಗುಂಕುಮದಂತಿರೆ ಕರ್ಣಲಗ್ನತೋ- ।
ಮರಮವತಂಸದಂತಿರೆ ನಖಕ್ಷತರಾಜಿವಿಭೂಷಣಾಳಿಯಂ ॥
ತಿರೆ ಮಿದಳುಣ್ಮೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರ ।
ಚ್ಚರಸಿಯರಣ್ಮೆ ಸತ್ತ ಭಟರಂ ಕೊನೆವಿೂಸೆಯ ಚೆನ್ನ[4]ಪೊಂಗರಂ[4] ॥ ೨೨ ॥

ಅಂತದಂ ನೋಡುತ್ತುಂ ಬರೆವರೆ—

ಶೃಂಗಾರಮೆಸೆಯೆ ತರಳಾ- ।
ಪಾಂಗದೆ ನಡೆನೋಡಿ ವೀರಭಟರಂ ತನ್ನು- ॥
ತ್ಸಂಗದೊಳಿಟ್ಟುಯ್ವ ನಿಳಿಂ- ।
ಪಾಂಗನೆಯುರನಂದು ನೋಡಿದಂ ಕುರುರಾಜಂ ॥ ೨೩ ॥

ಆಗಳ್ ಸಂಜಯನರಸನ ಚಿತ್ತವೃತ್ತಿಯನಱಿದು—

1 ಮೂವತ್ತೆರಡಾಯುಧಮುರವಣೆಯಿಂದುರ್ಚೆ1 ಮು. ಪು. ಪಾ.

2 ಳಿಂದ್ರಜಾಲದ2—ಮು. ಪು. ಪಾ.

3 ಪ್ತ3—ಮು. ಪು. ಪಾ.

4 ಗಂಡರಂ4—ಮು. ಪು. ಪಾ.

ಬಿಡದುತ್ಸಾಹಂ ಬೀರಮ- ।
ನೊದಱಿಸಿ ತಱಿಸಂದು ಚಲಕೆ ಬಿಡದಿಱಿದು ನೆಲಂ- ॥
ಬಿಡದಣ್ಮಿ ತಮ್ಮ ಮುಂದಿ- ।
ರ್ದವಿಯಂ ಪೆಱಗಿಡದೆ ಸತ್ತರಿಲ್ಲಿ ಭಟರ್ಕಳ್ ॥ ೨೪ ॥

ಪರಿದ ತಲೆ ಬಿಟ್ಟಬಾಯ್ ನಸು- ।
ಮುಱಿದ ಕೊರಲ್ ಮುಗುಳ್ದ* ಕಣ್ಗಳಾರುಣಜಲದಿಂ ॥
ತೊಱೆದ ತನುವೆರಸು ಬೀಭ- ।
ತ್ಸರಸಮನಭಿನಯಿಸುತಿರ್ದರಿಲ್ಲಿ ಭಟರ್ಕಳ್ ॥ ೨೫ ॥

ಕವಲಂಬು ತನ್ನ ಸಾರಿ- ।
ರ್ದವನಂ ಕೊಳೆ ನೆತ್ತರುಣ್ಮೆ ತಾಂ ನೊಂದೆನೆಗೆ- ॥
ತ್ತವಧರಿಸದೆ [1]ಮೂರ್ಛೆಯೊಳಂ- ।
ದವನುಂ ಕೆಡೆದಂತು[1] ಪಡೆಗೆ ಪಡೆದಂ ನಗೆಯಂ ॥ ೨೬ ॥

ಅಱಿಪಿದುದು ರೌದ್ರರಸಮಂ ।
ಪಿಱಿಸಿದ ಕುಡುಪುರ್ವು ಕರ್ಚಿದೌಡುರ್ಚಿದ ಬಾಳ್ ॥
ಇಱಿಯಲನುಗೆಯ್ದ ಕಯ್ ಬೆ- ।
ಳ್ಪಱೆ ಬಿಚ್ಚಸಿ ಬಿಟ್ಟ ಕಣ್ಗಳಾರೋಹಕರಾ ॥ ೨೭ ॥

ಬೆರಲಂ ಕರ್ಚುವ ಪುತ್ತಂ ।
ಪರಿದೇಱುವ ಕಯ್ದುವಿರಿಸಿ ಪೊ[2]ಡೆ[2]ಮಡುವ ಭಯ ॥
ಜ್ವರದಿಂ ನಡುಗುವ ಭೀರುಗ- ।
ಳರೆಬರ್ ಕನ್ನಡಿಸಿದರ್ ಭಯಾನಕರಸಮಂ ॥ ೨೮ ॥

---

1 ಬೇಗಂ ಮೂರ್ಛೆವೋಗಿ ಕಡುಪಂದೆ1 ಮು. ಪು. ಪಾ.

2 ಜ2 ಮು. ಪ್ರ. ಪಾ.

[3]ನಿರರ್ಥನಿರ[3]ಹಂಕಾರಂ ।
ನಿರಾಯುಧಂ ದೀನವದನದಿಂದಳ್ಕಿದರಂ ॥
ಕರುಣಿಸಿ ಕಳಿಪಿದರಿಱಿಯದೆ ।
ಪರಾಙ್ಮುಖಸ್ಥಿತರನಿಲ್ಲಿ ಕಡುಮುಳಿದಾಳ್ಗಳ್ ॥ ೨೯ ॥

ಕುದುರೆಗಳನೊಂದೆ ಪೊಯ್ಲಿಂ ।
ಮದಕರಿಗಳನೆರಡೆ ಪೊಯ್ಲೊಳಿರ್ಕಡಿ ಮಾಡ- ॥
ಲ್ಕದೆ ಖಡ್ಗಧರರ ಭುಜಬಲ- ।
ಮದೇಂ ನಿಮಿರ್ಚಿದುದೊ ರಣದೊಳದ್ಭುತರಸಮಂ ॥ ೩೦ ॥

ಕರಮಿಱಿದು ನೊಂದು ಕಯ್ದುಗೆ ।
ಕರಮಂ ತರಲಾಱದಿಷ್ಟದೈವದ ಚರಣ ॥
ಸ್ಮರಣಪರಿಣತನಿಜಾಂತಃ- ।
ಕರಣಂ ನಿಲೆ ನಿಂದುದವ*ರ್ಗೊಳ್ ಶಾಂತರಸಂ ॥ ೩೧ ॥

ಎಂದು ಸಂಜಯನರಸಂಗೆ ನವರಸಮಂ ಅಭಿನಯಸಂಮಾಡಿ ತೋಱುತ್ತುಂ ಒರೆವರೆ—

ಶರವರ್ಷಸುಭಟಗರ್ಜಿತ ।
ಕರಾಳಸಂಘಟ್ಟಜನಿತದಹನಶಿಖಾಭಾ ॥
ಸುರವಿದ್ಯುದ್ದೀಪ್ತಿಭಯಂ ।
ಕರಮಾದುದು ಕಾರ ದುರ್ದಿನಂ ರಣರಂಗಂ ॥ ೩೨ ॥

ಕೃತವಿದ್ಯರ ಭೀಕರಶರ ।
ತತಿ ಮೋಳೆ ತೇವಂತೆ ಸಮೆದು ಬಿಟ್ಟೆ ಸಂಗರದೊಳ್ ॥
ಗತಿಗಂತುಟು ಧರ್ಮಗುಣ ।
ಚ್ಯುತದಿನಘೋರಗತಿಗೆ ಬೀೞ್ವುದೊಂದಚ್ಚರಿಯೇ ॥ ೩೩ ॥

---

3ನಿರತೆನಿರಾ3—ಮು. ಪು. ಪಾ

ಪರಿಕಲಿತಶಿಳೀಮುಖನಾ ।
ನರಚಿಸ್ಸಂ ಪತ್ರಿಕುಲಚರಿತ್ರಂ ರಿಪುಭೀ- ॥
ಕರಮೆನಿಪಂತಕಕೃತನವ ।
ತರುವಿರ್ಪಂತಿರ್ದುದಲ್ಲಿ ಗಾಂಡಿವಿಯ ರಥಂ ॥ ೩೪ ॥

ಕಮನೀಯಕೇತುನಕ್ಷ- ।
ತ್ರಮಾಲಿಕಾರುಚಿರಮೆನೆ ಸುಭೂಷಣಘಂಟಾ- ॥
ರಮಣೀಯಮೆನಿಸಿ ಪವಮಾ- ।
ನಮಾರ್ಗನಿಭಮಿರ್ದುದಲ್ಲಿ ಭಗದತ್ತೇಭಂ ॥ ೩೫ ॥

ತುಂಗರಿಪುದಂತಿದಂತಾ- ।
ಲಿಂಗನಮುಂ ದಿವಿಜಸುಂದರೀತುಂಗಕುಚಾ- ॥
ಲಿಂಗನಮುಮೊಡನೆ ವೀರಭ- ।
ಟಂಗಾದುವು ರಣದೊಳಗ್ರ್ಯದಂಗರಿದುಂಟೇ ॥ ೩೬ ॥

ಕರಿಗಳ ಸಂಘಟ್ಟದಿನೊಗೆ- ।
ವುರಿಗಳ ಬಕ್ಕುಡಗಳರಿಯ ಬಕ್ಕುಡಗಳ್ ಜೋ- ॥
ದರ ಬಾಣಮಗ್ನಿಬಾಣಂ ।
ಕರಚಕ್ರ ತಮೋರಿಚಕ್ರಮೆನಿಸಿದುದೆನಸುಂ ॥ ೩೭ ॥

ಎಂದಿಂತು ತೋಳ್ಗುಡಿಯೆ ಸವ್ಯಾಪಸವ್ಯಸಂಮಿಶ್ರಿತನಿಶಿತನಾರಾಚಪರಂಪರಾಭಿಸಂಘಟ್ಟಿತಪ್ರಚಂಡತುಂಡಾಲಮಂಡಲಮಸ್ತಕಪಿಂಡವಿಗಲಿತವಿವಿಧದಾರುಣಾರುಣಸಲಿಲಸಂವರ್ಧಿತ ಸಹಸ್ರಮುಖಪ್ರಸಾರಿತಸರಸ್ವತೀಸರಿತ್ಪ್ರವಾಹನಿವಹಭಯಾನಕಮುಂ ಸಮರಸಹಸ್ರಾರಿಮುಖಭೀಕರಗದಾಪರಿಘಸಂಘಾತಸಂಚೂರ್ಣಿತಸಕಲಮಕುಟಬದ್ಧಮಣಿಗಣಮರೀಚಿಮಂಜರೀವಿರಚಿತಸುರಶರಾಸನಸಹಸ್ರಸಂಛಾದಿತಗಗನಮಂಡಲಮುಂ ಉಭಯಬಲಸುಭಟಕೋಟಿಪರಸ್ಪರಾಭಿನಿಘರ್ಷಣಸಂಘಟ್ಟನವಿಸ್ಫೂರಿತವಿಸ್ಫುಲಿಂಗನಿಚಯಚಕಚಕಿತನಿಖಿಳದಿಙ್ಮಂಡಲಮುಂ ಅಖಿಲಕರಿತುರಗರಥಭಟಬಲ

ಕಬಂಧನರ್ತನಾವಲೋಕನಾತಿಕುತೂಹಲೋನ್ಮಿಲಿತನಿಶಾಚರಪಿಶಾಚಭೂತವೇತಾಳೋತ್ತುಂಗಕರತಳಾಸನಕೋಳಾಹಳಕಳಕಳಾಟ್ಟಹಾಸಹಾಸ್ಯತ್ರಾಸಿತಸಕಲಕಟಕಚಾತುರಂಗಬಲಮುಕುಟಸಂಘಟಿತಚಕ್ರಚಟುಲಗತಿಯುದ್ಧಾಯುಧಪಾತರುಧಿರಕರ್ದಮಸಮ್ಮರ್ದಿತಮನುಷ್ಯಸಂಗ್ರಾಮಭೂಮಿಯೊಳಗನೆ ಬರ್ಪಲ್ಲಿ—

ಇನಿಸಿನಿಸು ತಿಂಬೆನೊರ್ಮೆಯೆ ।
ತಿನೆ ತವುಗುಮಿದೆಂದು ತಾಮುಮಾಸೆಯ ಪೇಱಸಂ ॥
ತಿನಲಾಱದೆ ಪೆಜ*ರ್ಗಿಕ್ಕದೆ ।
ಮನವಂ ಪಸುತಿರ್ದುವಲ್ಲಿ ಲೋಭಿಮರುಳ್ಗಳ್ ॥ ೩೮ ॥

*ಅವಿರಳಶವಕುಲಮಿರೆ ಲೋ- ।
ಭವಶದಿನತಿದೂರದಿಂದೆ ಬಂದ ಪಿಶಾಚಾ ॥
ನಿವಹಕ್ಕೆಲ್ಲಂ [ಶವ] ಮಾಂ- ।
ಸವಿಕ್ರಯಂ ಗೆಯ್ಯು[ವಲ್ಲಿ] ಪರದಮರುಳ್ಗಳ್ ॥ ೩೯ ॥

ನವರಕ್ತರಕ್ತವಸ್ತ್ರಂ ।
ನವಾಂತ್ರಯಜ್ಞೋಪವೀತಮೆಸೆಯೆ ಪಿಶಾಚಾ- ॥
ನಿವಹಮುನಡಗುಣಿಪೆಂದು ನ- ।
ವವೇದಮಂ ಪೇಳ್ವರಲ್ಲಿ ರಕ್ಕಸಪಾರ್ವರ್ ॥ ೪೦ ॥

ಮುಂ ಬಿಟ್ಟು ಕಾದಿ ಕೊಲೆ ಹೈ- ।
ಡಿಂಬಿಯನಾ ಸಮರರಂಗದೊಳ್ ಮಿಸಾನ್ ಮಿಸಾಸಂ ॥
ತಿಂಬಂತಿರೆ ನಾಯ್ ನಾಯಂ ।
ತಿಂಬಂತಿರೆ ತಿಂದರಲ್ಲಿ ರಕ್ಕಸಿಯರ್ಕಳ್ ॥ ೪೧ ॥

ನವಭೂತಭಾಷೆಯಿಂ ಕುಱು- ।
ಪ್ರವೇಟ್ಬ್ದ ತಾಮಡ್ಡಗಪಿತೆಯಂ ಮಾಡಿ ಮುಹಾ ॥

* ೩೯ನೇ ಪದ್ಯವು ಮದ್ರಾಸು ಪ್ರತಿಯಲ್ಲಿ ಮಾತ್ರವೇ ಇದೆ

ವ್ಯವಸಾಯಂಗೆಯ್ವ ಮರು- ।
ಳ್ವಿಗಳ್ ತಾವೇಂ **ಗುಣಾಢ್ಯರಂ** ಮಸುಳಿಸರೇ ॥ ೪೨ ॥

ಎನುತ್ತುಂ ಬರೆವರೆ—

ಗುರುವಿನ ನೆತ್ತರಂ ಕುಡಿವೆನಪ್ಪೊಡಮಂ ದ್ವಿಜವಂಶಜಂ ನಿಜಾ- ।
ವರಜನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದನೆಂಬ್ಬೆ ಭೀ- ॥
ಷ್ಮರ ಬಿಸುನೆತ್ತರಂ ಕುಡಿವೊಡಿನ್ನವೊಳಂ ಕುರುರಾಜ ನಿನ್ನ ನೆ- ।
ತ್ತರ ಸವಿನೋ[1]ಡ್ಪುದಾಂ[1] ಬಯಸಿ [2]ಬಂದ[2]ಪೆನೆಂದುದದೊಂದು ಪ್ರೆ-
ರುಳ್ ॥ ೪೩ ॥

ಅದಂ ಕೇಳುತ್ತುಂ ಬರೆವರೆ—

ಕವನದೊಳುಣ್ಮಿದೊಳ್ಮಿದುಳ ಕರ್ದಮದೊಳ್ ಜ*ಗುಳ್ದುಂಬ್ರಿ ಜಾಜಿ ಪೋ- ।
ಪ್ರದುಮೊಡನಿರ್ದ ಸಂಜಯನಿಳೇಶ್ವರನಂ ಪಿಡಿದೂರು ಭಂಗಮಾ- ॥
ಗದೆ ವಲಮೆಂದೊಡಾಗದೆನೆ ಪ್ರಲ್ಮರುಳೊಂದೆಡೆವೋಗಿ ಭೀಮಕೋ- ।
ಪದೆ ನಿನಗೂರುಭಂಗಭಯಮಾಗದೆ ಪೋಕುಮೆ ಕೌರವೇಶ್ವರಾ ॥ ೪೪ ॥

ಎಂದ ಮರುಳ ಮಾತು ತನಗೆ ಕರ್ಣಕಠೋರಮಾಗೆ ತನಗೆ ಮುನ್ನಂ ಮೈತ್ರೇಯರ್ ಕೊಟ್ಟ ಊರುಭಂಗಶಾಪಮಂ ನೆನೆನೆನೆದು ಮನದೊಳ್ ಕಟ್ಟುವಡೆದು ತಾಂ ಮಹಾಸತ್ತ್ವನಪ್ಪುದಱಿಂದಮೊಂದುಮಂ ಬಗೆಯದೆ ಮರುಳ ಮಾತಿನೊಳ್ ಪುರುಳೇನೆಂದರಸಂ ಪೋಗೆವೋಗೆ—

ಅರಗಿನ ಮಾಡದೊಳ್ ವಿಷದ ಲಡ್ಡುಗೆಯೊಳ್ ಕೊಲಲೆಂದು ಬಂಧುಮಾ- ।
ತ್ಸರದೊಳೆ ವೈರಮಂ ಪಡೆದು ಭೀಮನನಿನ್ನಿನಿತರ್ಕೆ ತಂದ ನೀಂ ॥
ಮರುಳೆಯೊ ಭೂತಕೋಟಿವೆರಸಾಹವರಂಗದೊಳಾಡುತಿರ್ಪ ತಾಂ ।
ಮರುಳೆನೊ ನೋ[1][ಟ್ಪುದಿ][1]ರ್ವರ ಮರುಳ್ತನಮಂ ಫಣಿರಾಜಕೇತನಾ
॥ ೪೫ ॥

---

1 ಟ್ಪಿ ನಂ 1–ಮು. ಪು. ಪಾ.

2 ಬೀತ2–ಮು. ಪು. ಪಾ.

1 ಟ್ಪಿವಿ1–ಮು. ಪು. ಪಾ.

ಎನೆ ಸುಯೋಧನಂ ಕೆಳಗಿವಿಗೇಳ್ವು ಮುರುಳೆ ನಾಕಿನೊಳ್ ಪ್ರುರುಳಿ ಲ್ಲಿಂಬು ಕಿಱಿದೆಡೆಯಂ ಪೋಗೆವೋಗೆ—

ನುಡಿಯದೆ ಪೋಗಲೀಯನೆಲೆ ಪೋದೊಡೆ ಧೂರ್ಜಟಿಯಾಣೆ ಮಾಱೆ ಪೋ— ।
ದೊಡೆ ಕಲಿಭೀಮನಾಣೆಯೆನೆ ಧೂರ್ಜಟಿಯಾಣೆಗೆ ನಿಂದು ಭೀಮನೆಂ— ॥
ದೊಡೆ ಮುಳಿದಟ್ಟಿಕುಟ್ಟಲರಸಂ ಗದೆಗೊಂಡೊಡೆ ಭೂತಕೋಟಿಯುಂ ।
ಬಡಿಗೊಳೆ ಸಂಜಯಂ ನಯದೆ ಬಗ್ಗಿಸಿದಂ ಫಣಿರಾಜಕೇತುವಂ ॥ ೪೬ ॥

ಅಂತು ಬಹುಳಪ್ರತ್ಯವಾಯಪ್ರದೇಶಂಗಳನೆಂತಾನುಂ ಕಳೆದು ಪೋಗೆ ಪೋಗೆ—

ಮುನಿದೆಯ್ತಂದಿಲ್ಲಿ ಭೀಮಂ ಭವದನುಜನನಾ ದ್ರೌಪದೀದ್ರೋಹನಂ ಕೊಂ-
ದನೆನಲ್ಕಾಂ ಕೇಳಲಾಱೆಂ ಪರಿಭವಮನದಂ ಮುಂದೆಮುಂದೆಂದು ಬಾಷ್ಪಾಂ
ಬುನಿಮಗ್ನಂ ಭಗ್ನಚಿತ್ತಂ ತಲೆಯನೆಱಗಿ [1]ಬಿಲ್ಲೋಜನೆಲ್ಲಿರ್ದನೆಲ್ಲಿ— ।
ರ್ದನೊ ಭೀಷ್ಮಂ ನೋಡುವೆಂ ತೋಱೆನೆ[1] ಕುರುಕುಲನಂ ಸಂಜಯಂ ಕೊಂಡುಪೋದಂ ॥ ೪೭ ॥

ಅಂತು ಪೋಗೆ—

ಇಭಶೈಲಂಗಳನೇಱಯೇಱಿ ರುಧಿರಸ್ರೋತಂಗಳಂ ದಾಂಟಿ ದಾಂ— ।
ಟಿಭದೋರ್ನೀಲಲತಾಪ್ರತಾನವಿಪಿನವ್ರಾತಂಗಳೊಳ್ ಸಿಲ್ಕಿ ಸಿ— ॥
ಲ್ಕಿ ಭರಂಗೆಯ್ದುಱಿದೆಯ್ದಿ ಸಂಜಯಶಿರಸ್ಕಂಧಾವಲಂಬಂ ಕುರು— ॥
ಪ್ರಭು ಕಂಡಂ ಶರಜಾಲಜರ್ಜರಿತಗಾತ್ರತ್ರಾಣನಂ ದ್ರೋಣನಂ ॥ ೪೮ ॥

ಗುರುವಂ ಲಘುಸಂಧಾನದೆ ।
ಸರಸಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತ— ॥
ದ್ಗುರು ತಚ್ಛಂದೋವೃತ್ತಿಗೆ ।
ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ ॥ ೪೯ ॥

1 ಬಿಲ್ಲೋಜನೆಲ್ಲಿರ್ದನೋ ಭೀಷ್ಮನ ನೋಬ್ಪೆಂ ತೋಱು ತೋಱೆಂದನೆ 1- ಮು. ಪು. ಪಾ.

ಅಂತೆನಿಸಿದರ್ ನಿಸರ್ಗದುಷ್ಟಧೃಷ್ಟದ್ಯುಮ್ನಕಚನಿಗ್ರಹಕರವಿಲುಳಿತ ವಲಿಯಾಗಿರ್ದ ಭಾರದ್ವಾಜನಿರವಂ ರಾಜರಾಜಂ ನೋಡಿ—

[1]ಅಱಿಯೆನೆ! ಬಿಲ್ಲ ಬಿನ್ನಣಕೆ ಗಾಂಡಿವಿಯುಳ್ಳ ಪಿನಾಕಪಾಣಿಯುಂ ।
ನೆಱೆಯನಿದಿರ್ಚಿ ನಿನ್ನೊಡನೆ ಕಾದಿ ಗೆಲಲ್ಕದು ನಿಮ್ಮುಪೇಕ್ಷೆಯಿಂ— ॥
ದಱಿಯೆನಿದೆನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವುದೇ— ।
ತೆಱದಿನಕಾರಣಂ ನೆಱೆಯೆ ಸಂಭವಿಸಿರ್ದುದೊ ಕುಂಭಸಂಭವಾ ॥ ೫೦ ॥

ಎಂದು ದುಃಖಂಗೆಯ್ದು ರಾಜರಾಜಂ ತದೀಯತನುಜನಂ ನೆನೆದು—

ಅದಟನ ಪಾರ್ಥನೆಚ್ಚ ಕೊಲೆ ಜಾತಬಲಂ ದ್ರುಪದಾತ್ಮಜಾತನೋ— ।
ವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋ— ॥
ದುದೊ ಶರವೆತ್ತವೋದುದೊ ಲಲಾಟವಿಸಿಂಗಳಗ್ನಿವೆತ್ತವೋ— ।
ದುದೊ ಗುರುಸೂನು ತಾನುಮುಣಮುಮ್ಮನಲಂಪುಮದೆತ್ತವೋದುದೋ
॥ ೫೧ ॥

ಶರಸಂಧಾನಮನನ್ಯಸೈನ್ಯದೊಡಲೊಳ್ ಬಿಲ್ಬಲ್ಮೆಯಂ ತನ್ನ ಶಿ— ।
ಷ್ಯರ ಮೆಯ್ಯೊಳ್ ನಿಜಕೀರ್ತಿಯಂ ನಿಖಿಳದಿಕ್ಚಕ್ರಂಗಳೊಳ್ ಚಿತ್ತಮಂ ॥
ಹರಪಾದಾಂಬುಜಯುಗ್ಮದೊಳ್ ನಿಱಿಸಿದಂ ಚಾಪಾಗಮಾಚಾರ್ಯ
ರೊಳ್ ।
ದೊರೆಯಾರಿಂಬಿನಮಣ್ಮ ಸತ್ತಳವಿದೇಂ ದ್ರೋಣಂಗೆ [2]ಮೆಯ್ವೆತ್ತುದೋ[2]
॥ ೫೨ ॥

ಎಂದು ಗುರುನಂದನನಂ ನಿಂದಿಸಿ ಗುರುವನಭಿವಂದಿಸಿ—

ಎನ್ನನುಪೇಕ್ಷಿಸಿ ಕಾದಿದ— ।
ನಿನ್ನೀ ಗುರುಗೆಱಗೆನಿನ್ನದೆಱಗಿದನಱಿಯೊ ॥
ಪನ್ನಗಚಿಹ್ನಂ ಪಿರಿಯರ್ ।
ಮುನ್ನಂ[3]ಕೂಡಿದುದನೆಡೆಯೊಳೇಂ ಕಿಡಿಸುವರೇ[3] ॥ ೫೩ ॥

1 ಅಱಿಯೆನೆ1—ಮ. ಪ್ರ. ಪಾ.
2 ಮೆಯ್ವೆತ್ತುದೋ 2—ಮ. ಪ್ರ. ಪಾ.
3 ಮುನ್ನಂ ಮಾಡಿದುದನೆಡೆಯೊಳೇಂ ಮಱೆದಪರೇ 3 ಮ. ಪ್ರ. ಪಾ.
3 ಮುನ್ನಂ ಮಾಡಿದುದನೆಳೆಯರೇಂ ಕಿಡಿಸುವರೇ 3—ಸಂ. ಪಾ.

ಎಂದು ಕುಂಭಸಂಭವನಂ ತ್ರಿಃಪ್ರದಕ್ಷಿಣಂಗೆಯ್ದು ಬರುತ್ತುಮಾ ವಿಶಾಖಾಗದೊಳ್ ಶರಸಂದೋಹಾಶ್ಚರ್ಯಶರಸಿಕರದಿಂ ಕ್ಷೀಣತರನಾಗಿ ಶರಾಚಾರ್ಯರ್ಗಭಿಮುಖನಾಗಿ—

ಅರೆಮುಗಿದಿರ್ದ ಕಣ್ಗಳುಮುಲರ್ದ ಮೊಗಂ ಕಡಿವೋದ ಕೆಯ್ಯುಮಾ- ।
ಸುರತರಮಾಗೆ ಕರ್ಚಿದವುಡುಂಬೆರಸನ್ಯಶರಪ್ರಹಾರಜ- ॥
ರ್ಜರಿತಶರೀರನಾಗಿ ನವಲೋಹಿತವಾರ್ಧಿಯೊಳದ್ದಿ ಬಿದ್ದನಂ ।
ಕುರುಪತಿ ನೋಡಿ ಕಂಡನಭಿಮನ್ಯುಕುಮಾರನನಾಜಿವೀರನಂ ॥ ೫೪ ॥

ಅಂತಾತನನಹಿಕೇತನಂ ನೋಡಿ—

ಗುರು ಪಣ್ಣಿದ ಚಕ್ರವ್ಯೂ- ।
ಹರಚನೆ ಪೆ*ಱರ್ಗರಿದು ಪುಗಲಿದಂ ಪೊಕ್ಕು ರಣಾ- ॥
ಜಿರದೊಳರಿನೃಪರನಿಕ್ಕಿದ ।
ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ ॥ ೫೫ ॥

ಪಲರಿರ್ದು ಕಾದಿದರ್ ಮು- ।
ಯ್ಯಲಿಗಳ್ ನಿನ್ನೊಂದೆ ಮೆಯ್ಯೊಳಂ ತವೆ ಕೊಂದರ್ ॥
ಪಲರಂ ನಿನ್ನಂ ಪೆತ್ತಳ್ ।
ನೊಳೆವೆತ್ತಳೆ ವೀರಜನನಿವೆಸರಂ ಪೆತ್ತಳ್ ॥ ೫೬ ॥

ಅಸಮಬಲ ಭವದ್ವಿಕ್ರಮ- ।
ಮಸಂಭವಂ ಪೆ*ಱರ್ಗೆ ನಿನ್ನನಾಸಿಸಿತಂ ಪ್ರಾ- ॥
ರ್ಥಿಸುವೆನಭಿಮನ್ಯು ನಿಜಸಾ- ।
ಹಸೈಕದೇಶಾನುಮರಣಮೆಮಗಕ್ಕೆ ಗಡಾ ॥ ೫೭ ॥

ಎಂದಾತ್ಮಗತದೊಳೆ ಬಗೆದು—

ಧಾರಿಣಿಯೊಳ್ ನಿಜಸಂಯುಗ ।
ಭಾರಮನಾಂತಿರ್ದ ವೀರಪುಂಗವರಿರೆ ತ- ॥

ದ್ವಾರಮನಾಂತಭಿಮನ್ಯುಕು- ।
ಮಾರಂ ಪುಗೆ ವೀರರಮಾನ್ಯನೆನಿಸಿದನಲ್ತೇ ॥ ೫೮ ॥

ತರುಣಯುವವೃದ್ಧವಿಕ್ರಮ ।
ಪರಿಣತರು[1]ಜದಿ[1]ಕ್ಕಿ ಸಿಂಹಸಾಹಸನಿವನುಂ ।
ತರುಣನೆ ಆನುಂ ಯುವನೆನೆ ।
ಸುರಾಪಗಾನಂದನಂ ಮಹಾಜರ್ಜರನೇ ॥ ೫೯ ॥

ಎಂದಭಿಮನ್ಯುಕುಮಾರನ ಸಾಹಸಕ್ಕೆ ಮೆಚ್ಚಿ

*
ಪಸಿದನೊಳನ್ನಮಂ ಪಸಿದು ಬಂದವರ್ಗಿರ್ಕ್ಕುವ ಯುದ್ಧರಂಗದೊಳ್ ।
ಕುಸಿಯದೆ ಸೊಜಿಗೊಳ್ಳದೆ ರಣಕ್ಕೆ ಸುಚಿತ್ತಮನಪ್ಪುಕೆಯ್ದ ಮಾ- ।
ನಸಿಕೆಯ ನಾಲ್ವರುಂ ನಮಗೆ ವಂದ್ಯರವಂದಿರೊಳೀತನಲ್ತೆ ಸಾ- ।
ಹಸಘನನೆಂದು ಕಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥ ೬೦ ॥

ಅಂತಭಿಮನ್ಯುಗೆ ಕಯ್ಗಳಂ ಮುಗಿದು ಬರುತ್ತುಂ ತನ್ನ ಮಗನಪ್ಪ ಲಕ್ಷ್ಮಣಕುಮಾರನಂ ನೆನೆದು ಮನ್ಯೂದ್ಗತಕಂಠನಾಗಿ ತದಾಸನ್ನಪ್ರದೇಶದೊಳ್ ತನ್ನ ಕುಮಾರನಂ ಕಂಡು—

ಗಳಿತಶರಮಾಯ್ತು ಹಸ್ತಂ ।
ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ॥
ಗಳಿತಾಶ್ರುವಾಯ್ತು ಕೌರವ ।
ಕುಲತಿಲಕಂಗಾ ಕುಮಾರನಂ ಕಾಣಲೊಡಂ ॥ ೬೧ ॥

ಅಂತು ಪುತ್ರಸ್ನೇಹಕಾತರಹೃದಯನಾಗಿ ಗಾಂಧಾರೀನಂದನಂ ಭಾನುಮತೀನಂದನನ ವದನಾರವಿಂದಮಂ ನೋಡಿ—

ಜನಕಂಗೆ ಜಲಾಂಜಲಿಯಂ ।
ತನೂಭವಂ ಕುಡುವುದುಚಿತಮದುಗೆಟ್ಟೀಗಳ್ ॥

1 ಮನಿ 1- ಸಂ. ಪಾ.

ನಿನಗಾಂ ಕುಡುವಂತಾದುದೆ ।
ತನೂಜ ನೀಂ ಕ್ರಮವಿಪರ್ಯಯಮನಾಡುವುದೆ ॥ ೬೨ ॥

ಸುರಪತಿಸುತಶರವರ್ಷಂ ।
ಸುರತರುನವಕುಸುಮವರ್ಷಮಾಗಿರೆ ನಿನಗೀ ।
ಗುರುಜನದೃಗ್ಜಲವರ್ಷಂ ।
ಮೊರೆಗೊಂಡಿತ್ತೆನ್ನ ಪಾಪಕರ್ಮನ ಕತದಿಂ ॥ ೬೩ ॥

ಎಂಬಲ್ಲಿ ನಿಲಲಾಱದಾ ಪ್ರದೇಶದಿಂ ತಳರ್ದು—

ಮದವದರಿಹಸ್ತಿಮಸ್ತಕ ।
ಭಿದುರಂ [ಭಯ] ವಿಧುರಸನ್ಯಬಾಣಚ್ಛಿದುರಂ ॥
ಮದಪತ ನಿರ್ವಿಶೇಷಂ ।
[ಮದವದ್ದೋರ್ಲಲಿತನೆತ್ತಣಂ] ವೃಷಸೇನಂ ॥ ೬೪ ॥

ಎಂದಜಿಸುತ್ತುಂ ಬಱಿವಱಿ ಧರ್ಮಪುತ್ರಕೋಪಾನಲದಹ್ಯಮಾನನಾಗಿರ್ದ ಶಲ್ಯನುಮಂ ವಿಜಯಶರವಿಲುಳಿತನಾಗಿರ್ದ ಭಗದತ್ತನುಮಂ ಗಾಂಡೀವಿಪ್ರಚಂಡಕೋದಂಡಶರಶಯನನಾಗಿರ್ದ ಸಿಂಧುರಾಜನುಮಂ ಸಹದೇವಖಡ್ಗೋಗ್ರಹಸ್ತಧ್ವಸ್ತನಾಗಿರ್ದ ಶಕುನಿಯುಮಂ ನಕುಲ ಕುಂತಕ ಬಳಿತಶರೀರನಾಗಿರ್ದ ದಂದಶೂಕರೆನಿಸಿದ ಶತಬಿಂದುವಿನಸುತಪಂಚಕಮುಮಂ ನಿವಾತಕವಚತಳತಳೂಕಪೌಲೋಮಪ್ರಮುಖಮುಹಾಸಮರ್ಥರೆನಿಪ ದೈತ್ಯಾವತಾರರುಮಂ ಕಾಮರೂಪದೇಶಾಧೀಶ್ವರರುಮಂ ಷಷ್ಟಿಸಹಸ್ರಕೋಟ್ಯತಿರಥರುಮನಷ್ಟಾದಶಕೋಟಿಸಮರಥರುಮಂ ಸಂಶಪ್ತಕನಾಮಧೇಯರೆನಿಸಿದ ಸುಶರ್ಮತ್ರಿಗರ್ತಾಧೀಶ್ವರರುಮಂ ಬಕಾಸುರನ ಮೊಮ್ಮನಪ್ಪ ಜಟಾಸುರನ ಮಕ್ಕಳಪ್ಪ ಹಲಾಯುಧಮುಸಲಾಯುಧಕಾಲನೀಲರೂಕ್ಷರಾಕ್ಷಸರುಮಂ ಕಾಂಭೋಜಸುದಕ್ಷಿಣದಂಡಧರರೆನಿಪ ಶಂಬಾಯುಧರುಮಂ ಸೌಬಲಬೃಹದ್ಬಲವಿಂದಾನುವಿಂದಪ್ರಭೃತಿಗಳುಮಂ ಕಂಡು ಶೋಕಾಕುಳೀಕೃತಚಿತ್ತನಾಗಿ—

[1]ಗುಣಿಗಳ್ ತ್ರಿಲೋಕಚೂಡಾ ।
ಮಣಿಗಳ್ ಕೈಲಾಸಕಲ್ಪಸುಭಟಾಗ್ರಣಿಗಳ್ ॥
[ಪೊಣರಲ್ ನೆರೆದೆನ್ನಯ] ಕಾ- ।
ರಣದಿಂದೀ ನೃಪಸುತರ್ಕಳಳ್ಗಾಡಿದರೇ[1] ॥ ೬೫ ॥

ಎಂದು ಪಶ್ಚಾತ್ತಾಪಂಗೆಯ್ಯೆ ಸಂಜಯಂ ಸಂತೈಸಿ—

ನಯಮುಂ ಪೇೞ್ವೊಡೆ ಸಂಧಿಮಾಡಿಜೀಯದಿರ್ ಕೌಂತೇಯರೊಳ್ ಯುದ್ಧಮಂ ।
ಕ್ಷಯದೋಷಾವಸಥಂ ಪ್ರಧಾನಪುರುಷರ್ ಕ್ಷತ್ರಕ್ಷಯಸ್ಥಾನಮುಂ ॥
ಮ ಯಥಾರ್ಥಂ ಮಡಿದಾರ್ತರಿಲ್ಲ ಮೊದಲೊಳ್ ನಿನ್ನಂ ಹಿಡಿಂಬಾಂತಕಂ ।
ಲಯಕಾಲಾಂತಕನಂತೆ ಕೊಲ್ಲದಿರನೀ **ಚಾಳುಕ್ಯಕಂಠೀರವಂ** ॥ ೬೬ ॥

ಗದ್ಯ. ಇದು ಸಮಸ್ತಭುವನವಲ್ಲಭ ಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ **ಶ್ರೀಸಾಹಸಭೀಮವಿಜಯದೊಳ್ ದುರ್ಯೋಧನಪ್ರಳಾಪವ್ಯಾವರ್ಣನಂ** ಚತುರ್ಥಾಶ್ವಾಸಂ ಸಂಪೂರ್ಣಂ ॥



1 ಗಣಿಸಲ್ ತ್ರಿಲೋಕಚೂಡಾ ।
ಮಣಿಗಳ್ ಕೈಲಾಸ ಶೈಲ [ಕಲ್ಪಕ] ಸುಭಟಾ ॥
ಗ್ರಣಿಗಳ್ ನೆರೆದೆನ್ನಯ ಕಾ- ।
ರಣದಿಂದೀ ನೃಪಸುತರ್ಕಳಳ್ಗಾಡಿದರೇ । 1 — ಮು. ಪು. ಪಾ.

## ॥ ಪಂಚಮಾಶ್ವಾಸಂ ॥

ಶ್ರೀಕಾಂತಂ ಸಮರಜಯ ।
ಶ್ರೀಕಾಂತಂ ಕುರುಕುಲಾಂತಕಂ ರಿಪುಜನದರ್ಪೋ-
ದ್ರೇಕಹರಂ ಮೃಗರಾಜಪ- ।
ತಾಕಂ ಕೇವಳನೆ ಸಮರಸಾಹಸಭೀಮಂ ॥ ೧ ॥

ಎಂಬುದುಮುದನವಕರ್ಣಿಸಿ ಭೀಮಸೇನನ ಗದಾಪರಿಘಪ್ರಹರಣದಿಂ ರುಧಿರಪ್ರವಾಹವಶಗತನಾಗಿರ್ದ ಯುವರಾಜನಿರ್ದೆಡೆಯುಂ ಕುರುರಾಜನೆಯ್ದೆವಂದಾಗಳ್ —

ಇದು ಭೀಮಂ ದೇವ ಕಾಳಿಂಗನ ಗಜಘಟೆಯುಂ ಕೊಂದ ತಾಣಂ ಧರಂಗೆ-
ಯ್ದಿದು ಭೀಮಂ ದೇವ ಕೌರವ್ಯರನಸಿಬರುಮಂ ತಿಂದತಾಣಂ ಮೊಗಂಬೊ-
ಕ್ಕಿದು ಭೀಮಂ ದೇವ ದುಶ್ಶಾಸನರುಧಿರಮುಮಂ ಪೀರ್ದ ತಾಣಂ ಛಲಂಬ-
ಟ್ಟಿದು ಭೀಮಂ ದೇವ ಧಾತ್ರೀಸುತನಿಭದೊಳಿಭಂ ಪೋರ್ವವೊಲ್ ಪೋರ್ದ
ತಾಣಂ ॥ ೨ ॥

ಪುಡಿಯೊಳ್ ಪೊರಳ್ಚಿಯುಂ ಮೆ- ।
ಯ್ಯತಗಂ ತಿಱಿತಿಱಿದು ಕೊಱೆದು ತಿಂದುಂ ಗೊಟ್ಟಂ ।
ಗುಡಿದುಂ ನೆತ್ತರನೆಂತುಂ ।
ಹಿಡಿಂಬರಿಪು ತಣಿದನಿಲ್ಲ ದುಶ್ಶಾಸನನಂ ॥ ೩ ॥

ಎಂದು ಸಂಜಯಂ ಪೇೞೆ ಕೇಳಗಿವಿಗೇಳ್ದು ಕಿಱಿದೆಡೆಯುಂ ಪೋಗೆ ತನ್ನ ತಮ್ಮನ ಕಣ್ಣಂ ಕರ್ದುಂಕುವ ಕಾಗೆಗಳುಮಂ ಕರುಳ ಪಿಣಿಲಂ ತೆಗೆವ ಪರ್ದುಗಳುಮಂ ಬರಿಯ ಬಳಸಿಂಗಂ ಬಂದು ಕಾಡುವ ಬಳ್ಳುಗಳುಮಂ ಸರವನುಗಿವ ನರಿಗಳುಮಂ ಸಿರಿಯ ತೆಗೆವ ಕಿರ್ಬಾಯ್ಗಳುಮಂ ಕೊರಲಂ ಕರ್ಚಿ ನಿಲ್ವ ಕೋಕಂಗಳುಮಂ ಪುಡಿಯೊಳ್ ಪೊರಳ್ವ ಪುಲ್ಮರುಳ್ಗಳುಮಂ ಬೆನ್ನ ಬೀನುಂ ತೆಗೆವ ಬೇತಾಳರುಮಂ ಕತ್ತಿಗೆಯುಂ ಕೊಂಡು ಕಪಾಲಮಂ ಕಡಿವ

ಕಾಳರಕ್ಕಸಿಯರುಮಂ ಪುಣ್ಬಾಬಾಯೊಳ್ ತಮ್ಮ ಬಾಯನಿಟ್ಟು ಭೀಮಂ ಕುಡಿದುೞಿದ ನೆತ್ತರಂ ಕುಡಿಯಲ್ ಪಡೆಯದಳವೞಿದು ಪುಯ್ಯಲಿಡುವ ಪಿಱೀತಿಸಿಯರುಮಂ ಕಂಡು ತಾನೆ ನೋಡು ಕಳೆದು ಸೌಘರ್ಜಿಕೆಗೆ ಮಿಕ್ಕು ಬರೆನಾರೆ ಅಬಲಂ ಸೈರಿಸಲಾಱದೆ—

ನಡುವ್ರಡಿನಸ್ನನೇಱಿ ಬಿಱಿಯೆಲ್ವುಡಿವನ್ನೆಗಮೊತ್ತಿ ಮೆಟ್ಟಿ ಮೇ ।
ಯ್ಯುತಗಡಗಾಗೆ ಮುನ್ನುರಮನಿರ್ಬಗಿಯಾಗಿರೆ ಪೋೞ್ದು ನೆತ್ತರಂ
ಕುಡಿ[ಕುಡಿದಾರ್ದ ವೈರಿಯುಱೆ]ದನ್ನೆಗಮೆನ್ನಬಲೆಂತು ಪೋಕುಮೆಂ ।
ಬಡಿಗಡಿಗಟ್ಟಿ ತನ್ನಣುಗದಮ್ಮನನೀಕ್ಷಿಸಿದಂ ಸುಯೋಧನಂ ॥ ೪ ॥

ಅಂತು ನಿಂದು ನೋಡಿ ಪಲುಂಬಿ ಪಲವಾಡಿ—

ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ ।
ನಿಜರಕ್ತಂ ರಿಪುಕುಕ್ಷಿಯೊಳ್ ನಿಜಶಿರಂ ನಕ್ತಂಚರೀಹಸ್ತದೊಳ್
ನಿಜಕಾಯಂ ಕುರುಭೂಮಿಯೊಳ್ ನೆಲಸೆ ಗಾಂಧಾರೀಜ ದುರ್ಯೋಧನಾ- ।
ನುಜ ದುಶ್ಶಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್ ॥ ೫ ॥

ಎಂದತಿಪ್ರಳಾಪಂಗೆಯ್ದು—

ನಿನ್ನಂ ಕೊಂದಂ ಗದೆಯೊಳ್ ।
ನಿನ್ನಂ ಕೊಂದವನನಿ[ಕ್ಕಿ]ಕೊಲ್ಲದೆ ಮಾಣ್ಬಾ- ।
ನಿನ್ನುಮೊಳೆಂ.[1](ಗಡಿಡಕ್ಕುಮೆ)[1] ।
ನಿನ್ನಯ ಕೂರ್ಮೆಗಮದೆನ್ನ ಸೌಘರ್ಜಿಕೆಗಂ ॥ ೬ ॥

ಜನನೀಸ್ತನ್ಯಮನುಂಡೆನಾಂ ಬಳಿಕೆ ನೀಂ ಸೋಮಾಮೃತಂ ದಿವ್ಯಭೋ- ।
ಜನಮಂ ಬಿಂತಿವನುಂಡೆನಾಂ ಬಳಿಕೆ ನೀಂ ಬಾಲತ್ವದಿಂದೆಲ್ಲಿಯುಂ ॥
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್ ।
ಮೊನೆಯೊಳ್ ಸೂೞ್ ತಡಮಾಯ್ತು ದೊಂದೆಡೆಯೊಳಂ ಹಾವತ್ಸ ದುಶ್ಶಾಸನಾ ॥ ೭ ॥

1 ಗಡಸಾಲದೆ1—ಮು. ಪು. ಪಾ.

ಎಂದು ಕುರುಕುಲಪ್ರದೀಪಂ ವಿಪ್ರಲಾಪಂಗೆಯ್ದು—

ಅನುಜನ ನೆತ್ತರನೀಂಟಿದ— ।
[1]ವನಸಿಂದಾಪ್ರಾಣ[1] ಸಹಿತಮೊಂಟದೆ ದುರ್ಯೋ— ॥
ಧನನೆಂಬ ಪೆಸರ್ಗೆ* ಮುಯ್ಯಾಂ— ।
ಪೆಸೆ ದುಶ್ಶಾಸನನ ಬನ್ನಮಂ ನೀಗುವೆನೇ ॥ ೮ ॥

ಎಂದು ಪಿಂಗಾಕ್ಷಂ ಕೋಪಾರುಣೀಕೃತನೇತ್ರನಾಗಿ ತನ್ನ ತಮ್ಮನ ಕಳೇಬರಮಂ ನೋಡಲಾಱದೆ ಅಲ್ಲಿಂ ತಳರ್ದು—

ಕರಿತುರಗನರಕಳೇಬರ ।
ಕರಾಳರಣರಂಗದಲ್ಲಿ ಬಱಿವರಿ ಕಂಡಂ ॥
ನರಕರವಿಮುಕ್ತಶರಜ— ।
ರ್ಜರಿತಾಂಗನನಂಗರಾಜನಂ ಕುರುರಾಜಂ ॥ ೯ ॥

ಆಗಳದಂ ಸಂಜಯಂ ಕಂಡು "ಗಂಡಸ್ಯೋಪರಿ ಸ್ಫೋಟಕ"ಮೆಂಬಂತೆ ನಿಜಪ್ರಿಯತನೂಜಾನುಜರ ಶೋಕದಿಂ ವಿಹ್ವಲೀಕೃತನಪ್ಪ ಧೃತರಾಷ್ಟ್ರಂಗೆ ನಿಜಪ್ರಿಯಸಖನಪ್ಪ ಕರ್ಣನ ದರ್ಶನದಿಂ ದುಃಖಂ ಮಱುಕೊಳಿಸುಗುಮೆಂದು ಮನದೊಳ್ ಬಗೆದಿರೆ—

ನೆಗಪಿ ವರೂಥಮಂ ವಸುಧೆ ನುಂಗಿದು[2]ದುಂ ಸಮಪಾದಶೋಭೆಯುಂ[2] ।
ಬಗೆಗೊಳೆ ತನ್ನ ಮುಂ ತೆಗೆದ ದಕ್ಷಿಣಮುಷ್ಟಿಯೆ ಕರ್ಣಮೂಲದೊಳ್ ॥
ಸೊಗಯಿಸೆ ಪಾಱಿಯುಂ ನಿಜಪದಾಳ್ಗನ ಕಜ್ಜಮನೊಕ್ಕ ಸತ್ತರಂ ।
ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತುದಂಡಮಂ ॥ ೧೦ ॥

ಅಂತಿರ್ದ ದಿನಕರತನೂಜನಂ ರಾಜಾಧಿರಾಜಂ ನೋಡಿ ಬಾಷ್ಪವಾರಿಧಾರಾಪೂರಿತಲೋಚನಂ ಮನ್ಯೂದ್ಗತಕಂಠನುಮಸಹ್ಯಶೋಕಾನಲದಹ್ಯಮಾನಾಂತಃಕರಣನುಮಾಗಿ—

1 ವನನೆತ್ತರಜೀವ1—ಮು. ಪು. ಪಾ.
2 ದಂ ಸಮಪಾದದಾಸನಂ2—ಮು. ಪು. ಪಾ.

ಆನುಂ ದುಶ್ಶಾಸನನುಂ ।
ನೀನುಂ ಮೂವರೆ ದಲಾತನುಂ ಕಱೆದ ಬಱಿ- ॥
ಕ್ಕಾನುಂ ನೀನೆ ದಲೀಗಳ್ ।
ನೀನು[1]ಮಗಲ್ದು[1]ತ್ತ್ರಪ್ಪೋದೆಯಂಗಾಧಿಪತೀ ॥ ೧೧ ॥

ನೀನಿಲ್ಲದರಸುಗೆಯ್ವೆನೆ ।
ನೀನಿಲ್ಲದೆ ಬಾಳ್ವ[ನೆಂದು] ಬಗೆದಪ್ಪೆನೆ [ಪೇೞಾ] ॥
ನೀನಿಲ್ಲದಹಿತರೊಳ್ ಸಂ- ।
ಧಾನಂಮಾಡುವೆನೆ ಕೂಡೆಸಂಗಾಧಿಪತೀ ॥ ೧೨ ॥

ನಿನ್ನ ಮಗಂ ವೃಷಸೇನಂ ।
ತನ್ನ ಮಗಂ ಸತ್ತ್ವನಣ್ಮ ಲಕ್ಷ್ಮಣನುಂ ನೀಂ ॥
ನಿನ್ನಂ ಸಂತೈಸುವುದಾಂ ।
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ॥ ೧೩ ॥

ಪೞಿಯಂ ಕೇಳ್ದೆನೊ ಮೇಣ್ನಡೆ- ।
ನೞಿಯಂ ತಪ್ಪಿದೆನೊ ಕಾಣೆ[2][ನಣ್ಮಿಂದಂ ಕೂ- ॥
ರ್ತಱಿದಿವರಂ ಪಗೆದೆನೊ][2]ಪ ।
ಚ್ಚಱಿದೆನೊ ಪೇೞ್ ಕೂಡಿ ನಿನ್ನೊಳಂಗಾಧಿಪತೀ ॥ ೧೪ ॥

ಅಜ್ಞೆಯೆನಿದಂ ನಿನ್ನಿಂದಿನ ।
ತೇಜನಂ ನೀನೆನಗದೇಕೆ ಮುಳಿದಿರ್ದಪೆಯೊ ಮೇಣ್ ॥
ಮಱುಮಾತುಗುಡದೆ ರವಿಸುತ ।
[3]ಮಱಸುಂ[3] ನಿದರ್ದಪೆಯೊ ಮೇಣ್ಬೞಲ್ದಿರ್ದಪೆಯೋ ॥ ೧೫ ॥

1 ಮಗುೞ್ದು—1ಮು. ಪು. ಪಾ.

2 ಕಣ್ಣಿಂದಂ ಕೂರ್ತಱಿಬಿಟ್ಟಿವರಂಬಗೆದೆನೊ2—ಮು. ಪು. ಪಾ.

2 ಇಲ್ಲಿ ಕೊಟ್ಟಿರುವುದು ಸಂಪಾದಕರ ಪಾಠಾಂತರ.

3 ಮಱವಿಂ3—ಮು. ಪು. ಪಾ.

[1]ನಿನ್ನ ಕೆಳೆಯ[1] ಸುಯೋಧನ- ।
ನಿನ್ನೊಡನೆ ನುಡಿಯದಪ್ಪಿಕೊಳ್ಳದೆ ಬೇಸನೆ- ॥
ನಿನ್ನದೆ ಜೀಯೆನ್ನದೆ ದೇ- ।
ವೆನ್ನದದೇಕುಸಿರದಿರ್ಪೆಯಂಗಾಧಿಪತೀ ॥ ೧೬ ॥

ಅನೃತಂ ಲೋಭಂ ಭಯಮೆಂ- ।
ಬಿನಿತುಂ ನೀನಿರ್ದ ನಾಡೊಳಿರ್ಕುಮೆ ದಿವಸಂ- ॥
ದನ ನನ್ನಿ ಚಾಗಮುಣ್ಮೆಂ- ।
ಬಿನಿತರ್ಕಂ ನೀನೆ ಮೊತ್ತಮೊದಲಿಗನಾದಯ್ ॥ ೧೭ ॥

ಆನಜೀವೆಂ ಪೃಥೆಯುಜೀವಳ್ ।
ದಾನವರಿಪುವಜೀವನರ್ಕನಜೀವಂ ದಿವ್ಯ- ॥
ಜ್ಞಾನಿಸಹದೇವನಜೀವಂ ।
ನೀನಾರ್ಗೆಂದಾರುಮಜೀಯರಂಗಾಧಿಪತೀ ॥ ೧೮ ॥

ಒಡವುಟ್ಟಿದನೆಂದಱಿದೊಡೆ ।
ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ ॥
ಕುಡಲಾರ್ತೆನಿಲ್ಲ ರಾಜ್ಯ- ।
ಕ್ಕೊಡೆಯನನಜೀಯುತ್ತುಮಿರ್ದೆನಂಗಾಧಿಪತೀ ॥ ೧೯ ॥

ನೀನುಳ್ಳೊಡುಂಟುರಾಜ್ಯಂ ।
ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್ ॥
ನೀನುಳ್ಳೊಡುಂಟು ಪೀಱಿಗೆ ।
ನೀನಿಲ್ಲದಿನೆಲ್ಲಮೊಳವೆ ಅಂಗಾಧಿಪತೀ ॥ ೨೦ ॥

ಇನಸುತ ಗಾಂಡಿವಿ ಸಂಮೋ- ।
ಹನಾಸ್ತ್ರದಿಂದೆಚ್ಚು ನಿದ್ರೆಯಂ ಮಾಡಿದನಂ- ॥

1 ನಿನ್ನಕೆಳೆಯಂ 1—ಮು. ಪು. ಪಾ.

ವಿನ ಗೋಗ್ರಹಣದೊಳೀಗಳ್ ।
ನಿನಗಿಂತೀ ದೀರ್ಘನಿದ್ರೆಯಂ ಮಾಡಿದನೇ ॥ ೨೦ ॥

[1]ಕಸವರಮಂ ದ್ವಿಜದಾನಕೆ[1] ।
ಪೊಸಜೌವನಮಂ ಸ್ವದಾರಸಂತೋಷ[2]ಕೆ[2] ಸಾ ।
ಹಸಮಂ ಪತಿಕಾರ್ಯ[3]ಕೆ[3] [4]ವೆ- ।
ಚ್ಚಿಸಿದನ[4] ನಿನ್ನನ್ನನಾವನಂಗಾಧಿಪತೀ ॥ ೨೧ ॥

ಹರಿ ಬೇಡೆ ಕವಚಮಂ ನೀ- ।
ನರಿದಿತ್ತಯ್ ಕೊಂತಿ ಬೇಡೆ ಬೆಸ್ಸದೆ ಕೊಟ್ಟಯ್ ॥
ಪುರಿಗಣೆಯಂ ನಿನಗೆಣೆ ಕಸ- ।
ವರಗಲಿ ಪೆಯ್ಗಲಿಯುಮಾವನಂಗಾಧಿಪತೀ ॥ ೨೨ ॥

ನಯನದೊಳಮೆರ್ದೆಯೊಳಂ ನಿ- ।
ನ್ನಯ ರೂಪಿರ್ದಪ್ಪುದು ನಿನ್ನ ಮಾತಿರ್ದಪ್ಪುದೆ- ॥
ನ್ನಯ ಕಿವಿಯೊಳಗಿನನಂದನ ।
ವಿಯೋಗಮೆಂತಾದುದಱಿಯೆನಂಗಾಧಿಪತೀ ॥ ೨೩ ॥

ನಿನ್ನಂ ಕೊಂದ ಕಿರೀಟಿಯು- ।
ಮೆನ್ನನುಜನನಿಕ್ಕಿ ಕೊಂದ ಭೀಮನುಮೊಳನಾ- ॥
ನಿನ್ನುಮೊಳೆಂ [5][ಗಡಿದಕ್ಕುಮೆ][5] ।
ನಿನ್ನಯ ಕೂರ್ಮೆಗಮುದೆನ್ನ ಸೌಧರ್ಮಿಕೆಗಂ ॥ ೨೪ ॥

ಪರಶುಧರಂ ಚಕ್ರಧರಂ ।
ಸುರಪತಿ ಭೂಕಾಂತೆ ಕೊಂತಿಯೆಂದೀಪೇಟ್ಟಿ- ॥

1 ವಸುವಂದ್ವಿಜನ್ಮದಾನದೆ 1—ಮು. ಪು. ಪಾ.
2 ದೆ 2—ಮು. ಪು. ಪಾ.
3 ದ 3—ಮು. ಪು. ಪಾ.
4 ವರ್ಜಿಸಿದ್ದೈ 4—ಮು. ಪು. ಪಾ.
5 ಗಡಸಾಲದೆ 5—ಮು. ಪು. ಪಾ.

ಯ್ವರೆ ಕೂಡಿ ನಿನ್ನ ಕೊಂದರ್ ।
ನರನೊರ್ವನೆ ಕೊಂದನಲ್ಲನಂಗಾಧಿಪತೀ ॥ ೨೬ ॥

ಇಂದಾನಾದಂ ವೇಣಿನ- ।
ನಂದನ ಕೇಳ್ ಪಾಂಡು ತನಯರಾದರ್ ನಿನ್ನಂ
ಕೊಂದುಂ ದುಶ್ಶಾಸನನಂ ।
ಕೊಂದುಂ [1]ಬರ್ದುಕುವರೆ ಬರ್ದುಕರಂಗಾಧಿಪತೀ[1] ॥ ೨೭ ॥

ಎಂದನೇಕಪ್ರಕಾರದಿಂ ವಿಪ್ರಳಾಪಂಗೆಯ್ದು—

ಇನಸುತನಿರವಂ ದುಶ್ಶಾ- ।
ಸನನಿರವಂ ಕಂಡುಮಿನ್ನುಮೆನ್ನಸುವಿದು ಪೆ ॥
ಟ್ಟನೆ ಪೋದುದಿಲ್ಲ ಕಲ್ಲಿರ್ದ ।
ತನದಿಂದೆನ್ನಂತು ಬರ್ದುಕನಾವನುಮೊಳನೇ ॥ ೨೮ ॥

ಎಂದು ತನ್ನಂ ತಾನೇ ನಿಂದಿಸಿಕೊಂಡು—

ಸೂನುಗಳಳಿವಂ ಪ್ರಿಯಮಿ- ।
ತ್ರಾನುಜರಳಿವಂ ವಿಧಾತ್ರ ನೀಂ ಕಾಣಿಸಿ[2]ಮುಂ
ದೇ[2]ನಂ ಕಾಣಿಸಲಿರ್ದಪೆ ।
ನೀನೆನ್ನಂ ಪಾಪಕರ್ಮನಂ ನಿರ್ಗುಣನಂ ॥ ೨೯ ॥

ಎಂದು ವಿಧಾತ್ರಂಗೆ ಪಲುಂಬಿ ರಾಧಾನಂದನನ ಮೊಗಮಂ ನೋಡಿ ಸಂಜಯನನಿಂತೆಂದಂ—

ಆರೊಡನೆ ನುಡಿವೆನಟ್ಟಿಯೊ- ।
ಳಾರೊಡನೋಲಗದೊಳಿರ್ಪೆನಾರೊಡನೆ ಸಮಂ ॥

1 ಬರ್ದುಕುವನದಾವನಂಗಾಧಿಪತೀ 1 ಮು. ಪು. ಪಾ.
2 ಯಿನ್ನೇ 2 ಮು. ಪು. ಪಾ.

ತಾರೋಗಿಪೆನೇಱುವೆನಾ- ।
ನಾರೊಡನೆನ್ನೊಳುಗರಿಲ್ಲದಿಭವಾಜಿಗಳಿಂ ॥ ೩೦ ॥

ಕೆಳೆಯಂಗಾಯ್ತುಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ- ।
ತಳಮಂ ಕೊಟ್ಟಿಸಿವಂ ಜಳಾಂಜಳಿಯುಮಂ ನಾಂ ಕೊಟ್ಟೆಸಿಲ್ಲನ್ಯಮಂ ॥
ತಳಮಂ ಸುಟ್ಟಿಸಿವಂ ಪ್ರತಾಪಶಿಖಿಯಿಂದಾಸೀತನಂ ಸತ್ಕ್ರಿ ಯಾ- ।
ವಳಿಸಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತೆನೋ
॥ ೩೧ ॥

ಎಂಬುದುಂ ದೇವಾ ನೀಮಿಂತೇಕೆ ಪಱಿಪಿಸುವಿರೆಂದು ಸಂಜಯ ನಿಂತೆಂದಂ—

ಜಲದಾನಕ್ರಿಯೆಯಂ ದೃ- ।
ಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ॥
ಕೆಳೆಯಂಗೆ ಮಾಡಿದಯ್ ಕುರು- ।
ಕುಲದರ್ಪಣ ಮಱೆವುದಿನ್ನಹರ್ಪತಿಸುತನಂ ॥ ೩೨ ॥

ಪೆಂಡಿರ್ ಪಱಿಯಿಸುವಂದದೆ ।
ಗಂಡರ್ ಪಱಿಯಿಸಿದೊಡಾಯುಮಂ ಫಲಮಂ ಕಯ್- ॥
ಕೊಂಡೆಸಪರಾರೊ ಕುರುಕುಲ ।
ಮಂಡನ ನೀನೆತ್ತಿಕೊಂಡ ಫಲಮನೆ ಮೆಱೆಯಾ ॥ ೩೩ ॥

ಎಂದು ಸಂಜಯಂ ನುಡಿದ ನುಡಿಯನವಧಾರಿಸಿ—

ದರಹಾಸಪೇಶಲಂ ದಿ- ।
ಕ್ಕರಿಗಮನಂ ಕನಕಪರ್ವತಪ್ರಾಂಶು ದಿನೇ- ॥
ಶ್ವರಸುತನ ರೂಪು ಚಿತ್ರಂ ।
ಬರೆದಂತಿರ್ದಪುದು ಚಿತ್ತಭಿತ್ತಿಯೊಳೆನ್ನಾ ॥ ೩೪ ॥

ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಲೋಚನಕ್ಕಾಳ್ದ ಸು- ।
ವ್ವರೆಯಂ ಕಾವ ಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆಯಾಳ್ ॥

ಗುರುಭಾರಕ್ಕೆ ಜೀವಾಳ್ ರಣಕ್ಕೆ ತುೞಿಲಾಳ್ ಕಟ್ಟಾಯದೊಳ್ ಮೇೞವಾಳ್ ।
ಪರಿಹಾಸಕ್ಕೆಸಿಸಿದರ್ನೆಂತು ಮಱೆವಂ ದುರ್ಯೋಧನಂ ಕರ್ಣನಂ ॥ ೩೫ ॥

ದಿವಿಜತನಯಂಗೆ ಮುಖ್ಯಂ ।
ರವಿಜಂ[1][ಜಯಕಾ][1]ದನೆನಗೆ ಕಣ್ಗೊಳ್ ಕಾಣಂ ॥
ಕಿವಿಯೊಳ್ ಕೇಳಂ ಕಾಣ್ಬಂ- ।
ದವೆಂತು ಕೇಳ್ವಂದವೆಂತು ತಲೆಯುಳ್ಳದನಂ ॥ ೩೬ ॥

ಎಂದು ಶೋಕಾಂಧಂ ಕರ್ಣವಿರಹಿತನಪ್ಪುದಱಿಂ ಸಂಕ್ರಂದನ ನಂದನಂಗೆ ಮುಳಿದು—

[2][ತರಣಿತನಯಾನನೇಂದು][2]
ಸ್ಮರಣದೆ ಕಯ್ಗಣ್ಮುವೆನ್ನ ಶೋಕಮಹಾಸಾ- ।
ಗರಮಂ ತವೆ ಪೀರ್ದುದು ಭೀ- ।
ಕರಮತ್ಕ್ರೋಧಾಗ್ನಿ ಬಾಡಬಾಗ್ನಿಯ ತೆಱದಿಂ ॥ ೩೭ ॥

ಎಂದು ಶೋಕರಸಮಂ ಕ್ರೋಧರಸದ ಮೇಲಿಕ್ಕಿ ಮಾರ್ಪಡೆಯುಯ್ತುವರ್ಪುದಂ ನೋಡಿ ನಡೆವ ದಂದಶೂಕಪತಾಕನ ಗೆಲ್ಲದ ಮುಳಿಸಿ ನಂದಮುನಱಿದು ಸಂಜಯನೆಂದನೆಲೆ ದೇವಾ ಭೀಷ್ಮರಿತ್ತಲಿರ್ದಪರಿತ್ತ ಬಿಜಯಂಗೆಯ್ಯಿಂ ನಿಜಗುರುಜನಪ್ರಾರ್ಥನಾಭಂಗಂ ಮಾಡಲಾಗದು ಇಂ ನೀಂ ನೆಗೞ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಳೋಚಿಸಿ ನೆಗೞ್ವುದೆನೆ ಪೇೞ್ವುದುಂ ನಿಜಗುರುಜನಪ್ರಾರ್ಥನಾಭಂಗಂಮಾಡದೆ ಸಂಜಯನ ಮಾತಂ ಮಿಱದೆ ಶರಶಯನಗತನಾಗಿರ್ಪ ನದೀನಂದನನ ಚರಣಾರವಿಂದ ವಂದನಂಗೆಯ್ಯಲೆಂದು ಗಾಂಧಾರಿಯ ನಂದನನೆಯ್ದುವಂದು ಗಂಗಾನದೀ ನಂದನನಂ ಕಂಡು—

1 ಗಂಡಾ1—ಮು. ಪು. ಪಾ.
2 ತರಣಿಯ ತನಯನ ನೆನೆದಾ2 ಮು. ಪ್ರ. ಪಾ.
2 ತರುಣಿತನೂಜ ಗುಣೌಘ 2—ಮು. ಪ್ರ ಪಾ.

ನರಶರಕೋಟಿ ಜರ್ಜರಿಸೆ ತನ್ನ ಶರೀರಮನಸ್ತ್ರವೇದನಾ ।
ಪರವಶನಾಗಿಯುಂ ಮಱೆದನಿಲ್ಲ ಮುಕುಂದನನೇಕಚಿತ್ತದಿಂ ॥
ಸ್ಮರಿಯಿಸುತಿರ್ದನತ್ತಲರಿಭೂಪರಿನೆಂತುಟವಸ್ಥೆಯಾದುದೋ ।
ಕುರುಪತಿಗೆಂದನಾ ಪರಮಯೋಗಿಗಮೆಂತುಟು ಮೋಹನಾಗದೇ ॥ ೩೮ ॥

ಕವಲಂಬುಂ ತಲೆಗಿಂಬಿನ ।
ಕಪ್ಪುಳಿಂಡೆ ಶರಮಂಚನೆರಸಿದರಲಂಬು ಹಾಸಂ ।
ಬಿಪ್ಪ ಬಾಣಗಣದಿನೆಸೆದಿರೆ ।
ವಿಬುಧನದೀಸೂನು ಶಸ್ತ್ರಶಯನದೊಳಿರ್ದಂ ॥ ೩೯ ॥

ಅಂತಿರ್ದ ನದೀನಂದನನಂ ಕಂಡು ರಾಜರಾಜಂ ನೋಡಿ ಬಾಷ್ಪಪ್ಲುತಕಂಠನಾಗಿ—

ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇೞ್ದ ಹಿತೋಪದೇಶಮಂ ।
ಮನದೊಳವಜ್ಞೆಗೆಯ್ದನಿಲನಂದನನ್ನೆರದೆ ನಿಮ್ಮನಿಂದ್ರನಂ– ॥
ದನನೊಡನಾನೆ ಕಾದಿಸಿದೆನಾನೆ ಕಡಂಗಿದೆನೆನ್ನ ಪಾಪಕ– ।
ರ್ಮನ ಕತದಿಂದಮೀ ನಿಮಗಮೀಯಿರವಾದುದೆ ಸಿಂಧುನಂದನಾ ॥ ೪೦ ॥

ಎಂದು ಪಶ್ಚಾತ್ತಾಪಂಗೆಯ್ಯುತುಂ ಮುಂಬರ್ಪ ತನ್ನ ಮೊಮ್ಮನ ಕಾಲಸೊಪ್ಪುಳಂ ಕೇಳ್ದು ವಿಕಚಧವಳಕುವಲಯವಿಲಾಸಿತೋಪಹಾಸಿತಂಗಳುಂ ಕರ್ಣಾಂತವಿಶ್ರಾಂತಂಗಳುಮಪ್ಪ ತನ್ನ ಕಣ್ಗಳನರೆದೆಱೆದು ದರನಿಮೀಲಿತಲೋಚನಕಮಲಾಕರನಿರ್ಪಂತಿರ್ದ ಶಂತನುತನೂಜನ ಕರ್ಣಭೃಂಗಮಂ ಪೊರ್ದಿ ಸಂಜಯನೆಂದಂ ಅಜ್ಜಾ ನಿಮ್ಮ ಮೊಮ್ಮನಪ್ಪ ಕುರುಕುಲಗಗನಗಭಸ್ತಿಮಾಲಿ ಬಾಹುಶಾಲಿ ದುರ್ಯೋಧನಂ ಬಂದನೆಂದು ಬಿನ್ನಪಂಗೆಯ್ಯೆ ಯೋಗಿ ಯೋಗಮನುಪಸಂಹರಿಸಿ ತನ್ನ ಚರಣೋಪಾಂತೋತ್ತಮಾಂಗನಾಗಿರ್ದ ಪನ್ನಗಪತಾಕನಂ ಕುರುಕುಲೋತ್ತಂಸನಂ ಪರಮಾನಂದದಿಂ ಭೀಷ್ಮನಾಶೀರ್ವಚನಸಹಸ್ರಂಗಳಿಂ ಪರಸಿ ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಾದಂಡಂಗಳಿಂದೆ ತೆಗೆದಪ್ಪಿ ಬಾಷ್ಪಾಂಬುಪೂರಿತಲೋಚನನಾಗಿ —

ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ।
ಧವಳವಿಲೋಚನೋತ್ಪಲವಧೂಜನಮುಂ ಬೆರಸಪ್ಪುದಿಕ್ತಟಂ
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯಮನೊಪ್ಪೆ ಬರ್ಪ ಕೌ।
ರವಧವಳಂಗೆ ದೇಸಿಗನೆ ಬರ್ಪನ್ನೊಲೊರ್ವನೆ ಬರ್ಪುದಾದುದೇ
॥ ೪೧ ॥

ಎಂದು ಏಕಾಕಿಯಾಗಿ ಬಂದ ಧೃತರಾಷ್ಟ್ರನಂದನನ ಬರವಿನೊಳ್ ಸರಿತ್ಸುತಂ ಸಮರವೃತ್ತಾಂತಮನಱಿದು ವಿಸ್ಮಯಾಕ್ರಾಂತಸ್ವಾಂತನುಮಾಗಿ-

ಎಲ್ಲಿದುವೊ ಧವಳಚಾಮರ- ।
ಮೆಲ್ಲಿ[1]ತ್ತೊ ಸಿತಾ[1]ತಪತ್ರಮುಹಿಕೇತನಮುಂ ॥
ತ್ರೈಲ್ಲಿತ್ತೊ ಮೃಗೇಂದ್ರಾಸನ- ।
ಮೆಲ್ಲಿದುವೋ ಲೋಲಪಾಲಿಕೇತನತತಿಗಳ್ ॥ ೪೨ ॥

ಎಲ್ಲಿದಳೊ ಭಾನುಮತಿ ತಾ- ।
ನೆಲ್ಲಿತ್ತೋಲಗದ ಸೂಳೆಯರ್ಕಳ ತಂಡಂ ।
ಎಲ್ಲಿತ್ತೊ ಗೀತವಾದ್ಯಂ ।
ಸಲ್ಲಲಿತವಧೂಜನಪ್ರನೃತ್ತಂ ನೃತ್ತಂ ॥ ೪೩ ॥

ಸುತಶತಕಮುಂ ಸಹೋದರ ।
ಶತಕಮುಮೆಲ್ಲಿತ್ತೊ ಮಗನೆ ಪೇಟೆಲ್ಲಿತ್ತೋ ।
ಚತುರಂಗಸೈನ್ಯಮೆಲ್ಲಿದ- ।
ರತಿರಥಸಮರಥಮಹಾರಥಾರ್ಧರಥರ್ಕಳ್ ॥ ೪೪ ॥

ಎಂದು ಶೋಕಂಗೆಯ್ಯೆ ರಾಜರಾಜಂ ನವೀತಸೂಜನಂ ಮಾಣಿಸಿ ಸೀವಪ್ಪೊಡೆ ವಿದಿತವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ ಅಂತೆ ನೆಗಟಿಲಾಗದೆಂದು ನಿಜಾಗಮನವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದೊಡೆ ಕಿಱಿದಾನುಂ ಬೇಗಂ ಚಿಂತಾಕ್ರಾಂತನಾಗಿರ್ದು

1 ತ್ರೀಕಾ 1 — ಮು. ಪು. ಪಾ.

ಮಗನಿ ಕಮಲನಾಭನ ನಾಭೀನಳಿನಸಂಭವಹಿರಣ್ಯಗರ್ಭನ ಮಾನಸ್ನಂಭ ವರನಪ್ಪ ಸಪ್ತರ್ಷಿಯರೊಳಗೆ ಜಗತ್ಪವಿತ್ರನಪ್ಪತ್ರಿನೇತ್ರಸಂಜಾತಸೋಮನಿಂ ಸೋಮವಂಶವಾದುದು ಆ ಸೋಮವಂಶದೊಳನೇಕರರಸುಮಕ್ಕಳು ಮತಿಕ್ರಾಂತರಾದರ್ ಅವರೊಳ್ ಸತ್ಯನೆಂಬವಂಗೆ ಭರತನೆಂಬನಾದಂ ಆತನಿಂ ಬಳಿಕ್ಕೆ ಭರತಾನ್ವಯಮೆಂಬುದಾದುದು ಆ ಭರತಕುಲದೊಳಪ್ರ-ತಿಮಪ್ರಬಲಪ್ರತಾಪಂ ಪ್ರತೀಪನೆಂಬನಾತಂಗೆ ಪುಟ್ಟಿದರ್[1]ಶಂತನುವುಂ[1] ಬಾ ಹ್ಲಿಕನುಂ ವಿನುತನುಂ ದೇವಾಪಿಯುಮೆಂಬೀ ನಾಲ್ವರ್ ತನೂಜರಾದರ್ ಅಲ್ಲಿ [2]ಶಂತನುಗಂ[2] ಗಂಗಾದೇವಿಗವಾಂ ಪುಟ್ಟಿದಂ [3]ಬಾಲ್ಯಕಾಲದೊಳ್[3] ಕೈಕೊಂಡಂಗಿ ಪರಿಗೃಹೀತಬ್ರಹ್ಮಚರ್ಯವ್ರತಪರಿಣತನಾದಂ ಏಮ್ಮೆನ್ನನಪ್ಪ ಶಂ ತನುಗಂ ಯೋಜನಗಂಧಿಯೆನಿಸಿದ ಸತ್ಯವತಿಗಂ ಚಿತ್ರಾಂಗದನುಂ ವಿಚಿತ್ರವೀ ರ್ಯನುಮೆಂಬಿರ್ವರ್ ತನೂಜರಾದರ್ ಅವರ ಪರೋಕ್ಷದೊಳ್ ನಷ್ಟಸಂತ ತಿಯಾಗೆ ಕೃಷ್ಣದ್ವೈಪಾಯನರ ವರಪ್ರಸಾದದಿಂದಂಬಿಕೆಗೆ ಧೃತರಾಷ್ಟ್ರನುಂ ಅಂಬಾಲಿಕೆಗೆ ಪಾಂಡುರಾಜನುಂ ಅವರ ಸೂಳೆಯಪ್ಪಾಕೆಗೆ ವಿದುರನು ಮೆಂಬ ಮೂವರ್ ತನೂಜರಾದರ್ ಇಂತು ಸೋಮವಂಶದಿಂದಮವಿಚ್ಛಿನ್ನ ವಾಗಿಬಂದ ಭರತಾನ್ವಯದೊಳಿನ್ನೆವರಂ ಗೋತ್ರಕಲಹಮೆಂಬುದಾದುದಿಲ್ಲ ನಿಮ್ಮೊಳಾದುದು ಇನ್ನಾನೆಂಬುದನಿಂಬುಕೆಯ್ವೊಯಪ್ಪೊಡೆ ಪಾಂಡವರನೊ ಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾಳ್ಪೆಂ। ಇನ್ನುಮವರಿನ್ನೊಂದುದಂ ಇಂಬುಕೆಯ್ಯದವರ್ ವಿರಾಜುವರಲ್ಲ ನೀನು ಮೆಮ್ಮ ಪೇಳ್ದುದಂ ವಿರಾಜದೆ ನೆಗಬಲ್ವೇಳ್ಕುಮೆನೆ ಸುಯೋಧನಂ ಮುಗು ಳ್ನಗೆನಕ್ಕು—

ನಿಮಗೆ ಪೊಡೆಮಟ್ಟು ಪೋಪೀ।
ಸಮಕಟ್ಟಿಂ ಬಂದೆನಹಿತರೊಳ್ ಸಂಧಿಯನೇಂ॥
ಸಮಕೊಳಿಸಲೆಂದು ಬಂದೆನೆ।
ಸಮರದೊಳೆನಗಜ್ಜ ಪೇಳಿಮಾವುದು ಕಜ್ಜಂ ॥ ೪೫ ॥

1 ಶಾಂತನುಂ1—ಮು. ಪ್ರ. ಪಾ.
2 ಶಾಂತಂಗಂ2—ಮು. ಪ್ರ. ಪಾ.
3 ಚಿರಕಾಲಂ3—ಮು. ಪು. ಪಾ.

ಕಲಿಗಂ ತಂಕೆಯೆ ಚಾಗಿಗಂ ಬೆರಗೆ ಮೇಣ್ ಕಟ್ಟಾಳ್ಗೆ ಸೆರಂಬಾರ್ವನೇ
ಕುಲಜಂಗಂ ಮಱುವಾಳೆ ಸಜ್ಜನಿಕೆಗಂ ಕಲ್ಪೋಱಿಜೆಯೇ ಧರ್ಮಿಗಂ ।
ಕೆಳೆಯೇ ಮಂತ್ರಿಗಮಿಚ್ಛೆಕಾಱತನಮೇ ತಕ್ಕಂ ಪಿಸುಣ್ಗೇಟ್ಟನೇ ।
ಚಲಮಂ ಗಂಡುಮನಪ್ಪುಕೆಯ್ವನಗಮಾ ಕೌಂತೇಯರೊಳ್ ಸಂಧಿಯೇ
॥ ೪೬ ॥

ನೆಲಕಿಱಿವೆನೆಂದು ಬಗೆದಿರೆ ।
ಚಲಕಿಱಿವೆಂ ಪಾಂಡುಸುತರೊಳೀನೆಲನಿದು ಪಾ- ।
ೞ್ಕಿಲನೆನಗೆ ದಿನಪಸುತನಂ ।
ಕೊಲಿಸಿದ ನೆಲನೊಡನೆ ಮತ್ತೆ ಪುದುವಾಳ್ವಪೆನೇ ॥ ೪೭ ॥

ಅನುಜಸಮೇತನೊಳಂತಕ- ।
ತನಯನೊಳನುಜವ್ಯಪೇತನೀಗಳ್ ದುರ್ಯೋ- ॥
ಧನನಳಿಪಿ ಸಂಧಿಗೆಯ್ವೊಡೆ ।
[1]ಮನಕರಿ[1] ಮೆಚ್ಚುವರ [2]ನುಡಿಗೆ[2] ಪಕ್ಕಾಗಿರೆನೇ ॥ ೪೮ ॥

ಕೂಡೆ ವಿರೋಧಿಯಂ ತಱಿದು ತದ್ವಶಮಾಂಸದೆ ಭೂತಭೋಜನಂ ।
ಮಾಡದೆ ವೈರಿವಾರವನಿತಾವದನಾಂಬುರುಹಂಗಳಂ ಬೆಳ- ॥
ರ್ಮಾಡದೆ ಬಂಧುಶೋಕದೊಳೆ ಪೊರ್ದಿದ ಬಂಧುಜನಕ್ಕೆ ಸಂತಸಂ ।
ಮಾಡದೆ ಸಂಧಿಮಾಡುವನೆ ಪಾಂಡವರೊಳ್ ಫಣಿರಾಜಕೇತನಂ ॥ ೪೯ ॥

ಬಾಡಮನಯ್ದನವರ್ ಮುಂ ।
ಬೇಡಿದೊಡಾನಿತ್ತೆನಿಲ್ಲ ರಾಜ್ಯಾರ್ಧಮನಾಂ ॥
ಬೇಡಿಯುವರಲ್ಲಿಗಟ್ಟಿದೊ- ।
ಡೇಡಿಸಿ ಜೋಡಿಸನೆ ಪವನನಂದನನೆನ್ನಂ ॥ ೫೦ ॥

ಎನ್ನಣುಗಾಳನೆನ್ನಣುಗದಮ್ಮನನಿಕ್ಕಿದ ಪಾರ್ಥಭೀಮರು- ।
ಳ್ಳೆನ್ನೆಗಮೊಲ್ಲೆನೆನ್ನೊಡಲೊಳೆನ್ನಸುವುಳ್ಳಿನಮುಜ್ಜ ಸಂಧಿಯಂ ॥

1 ಮುನಿವರ 1—ಮು. ಪು. ಪಾ.
2 ಮನಕೆ2 ಮು. ಪು. ಪಾ.

ಮುನ್ನಮುಮಂದಿರಿರ್ಬರುಮುಸಿಕ್ಕುವೆಸಿಕ್ಕಿ ಬೞಿಕ್ಕೆ ಸಂಧಿಗೆ ।
ಪೆಣ್ಣಿಗನಂ*ತಕಾತ್ಮಜನೊಳಿನ್ನಿಬಲಾಱಿದೊಡಾಗದೆಂಬೆನೇ ॥ ೫೧ ॥

ಎಂದು ಮತ್ತಮಿಂತೆಂದಂ—

ಪ್ರದುಪಾಕಲ್ಯಾಣವಾಗದೆಂತುಮವರೊಳ್ ಸಂಧಾನಮಂ ಮಾಡಲಾ- ।
ಗದು ಸೀಮಿಲ್ಲದೆಯುಜ್ಜ ಬಿಲ್ಲಗುರುಗಳ್ ತಾಮಿಲ್ಲದಾ ಕರ್ಣನಿ- ॥
ಲ್ಲದೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂ ।
ಪದಮಂ ತೋಱುವೆನಾರ್ಗೆ ತೋಱಿ ಮೆಱೆವೆಂ ನಾನಾವಿನೋದಂಗಳಂ ॥ ೫೨ ॥

ಖಂಡಿತಮೆನಿಪ್ಪ ಪರಮಹಿ ।
ಮಂಡಲಧವಳಾತಪತ್ರಸಂಪದಮೆನಗೇ ॥
ಭಂಡಮುದನೊಲ್ಲೆನೊಲ್ಲೆನ- ।
ಖಂಡಿತಮಭಿಮಾನಮುಡನೆ ಬಲ್ವಿಡಿದಿರ್ಪೆಂ ॥ ೫೩ ॥

ಪುಟ್ಟಿದ ನೂರ್ವರುಮೆನ್ನೊಡ- ।
ವುಟ್ಟಿದ ನೂರ್ವರುಮಿದಿರ್ಚಿ ಸತ್ತೊಡೆ ಕೋಪಂ ॥
ಪುಟ್ಟಿ ಪೊದಱ್ದುದು ಸತ್ತರ್ ।
ಪುಟ್ಟಿರೆ ಪಾಂಡವರೊಳಿಱಿದು ಫಲಮನೆ ಮೆಱೆವೆಂ ॥ ೫೪ ॥

ಕಾದದಿರೆನಜ್ಜ ಪಾಂಡವ- ।
ರಾದರ್ ಮೇಣೆಂದಿನೊಂದೆ ಸಮರದೊಳಾಂ ಮೇ- ॥
ಣಾದೆನದಱಿಂದೆ ಪಾಂಡವ- ।
*ಗಾದುದು ಮೇಣಾಯ್ತು ಕೌರವಂಗವನಿತಳಂ ॥ ೫೫ ॥

ಎಂದು ರಾಜಾಧಿರಾಜಂ ನಿರ್ವ್ಯಾಜಶೌರ್ಯಾವಳಂಬಿಯಾಗಿ ನುಡಿಯೆ ಗಾಂಗೇಯನಱಿಂದತಿವಿಸ್ಮಯಾಕುಲೀಕೃತಚಿತ್ತನುಂ ಮುಹುರ್ಮುಹುರಾಂದೋಳಿತೋತ್ತಮಾಂಗನುಮಾಗಿ—

ಜಲಧಿಗಳೇೞುಂ ಭೂಭೃ- ।
ತ್ಕುಲಂಗಳುಂ ರಿಪುಗೆ ಸಿರಿಯಸೀಮಂತೆತ್ತಂ ॥
ತಳಮುಳವಿಗೞಿಯೆ ಕುರುಕುಲ ।
ತಿಳಕಂ ರಿಪುಗೆಂತುಮೀವನಲ್ಲಂ ಶ್ರೀಯಂ ॥ ೫೬ ॥

ಜತುಗೇಹಾನಲಬೀಜಮುಗ್ರವಿಷಸಂಜಾತಾಂಕುರಂ ಕ್ರೀಡನೋ ।
ದ್ಧತಿಕೃದ್ದ್ಯೂತವಿನೋದಪಲ್ಲವಚಯಂ ಪಾಂಚಾಲರಾಜಾತ್ಮಜಾ- ॥
ಯತಕೇಶಗ್ರಹಪುಷ್ಪ[1]ಮಾಗೆ ಬೆಳೆದಾ[1]ವೈರದ್ರುಮಂ ಕೌರವ ।
ಕ್ಷಿತಿಪಾಲೋರುಕಿರೀಟಭಂಗ[2]ಫಲಮಂ[2]ಪೇೞ್ ಮಾಡದೇಂ
ಪೋಕುಮೋ ॥ ೫೭ ॥

ಎಂದು ನಿಶ್ಚಯಿಸಿ—

ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ ಕೌರವೇ ।
ಶ್ವರನೂರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ ಸಪ್ತಸಾ ।
ಗರಪರ್ಯಂತವಸುಂಧರಾತಳಮನೇಕಚ್ಛತ್ರದಿಂದಾಳ್ಗುಮೆಂ- ।
ಬರ ಮಾತಂ ಪುಸಿಯಾಗಲೀಯನದಟಂ **ಚಾಳುಕ್ಯಕಂಠೀರವಂ** ॥ ೫೮ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ **ಶ್ರೀಸಾಹಸಭೀಮವಿಜಯದೊಳ್ ಭೀಷ್ಮವಚನವ್ಯಾವರ್ಣನಂ** ಪಂಚಮಾಶ್ವಾಸಂ ಸಪೂರ್ಣಂ



1 ಮುಂಬಳೆದುದಾ1—ಮು. ಪು. ಪಾ.

2 ಭಯಮಂ2—ಮು. ಪು. ಪಾ.

## ॥ ಸಪ್ತಮಾಶ್ವಾಸಂ ॥

ಶ್ರೀವಧುವಂ ನಿಜಭುಜಶಾ-।
ಲಾವಷ್ಟಂಭದೊಳೆ ಕಟ್ಟಿದನಾದಲ್ ಜಯಲ ॥
ಕ್ಷ್ಮೀವಲ್ಲಭನಿರ್ದಂ ಪೃ-।
ಥ್ವೀವಲ್ಲಭನುದಿತಕೀರ್ತಿ **ಸಾಹಸಭೀಮಂ** ॥ ೧ ॥

ಅಂತು ಗಾಂಗೇಯಂ ಮನದೊಳ್ ಪೊಗೞ್ದು—

ಶರಮೊಂದಂ ತೆಗೆದು ನಿಜೋ-।
ದರದಿಂ ಲೆಕ್ಕಣಿಕೆಮಾಡಿ ಗಜಮದ ಮಸಿಯಂ ॥
ತರಿಸಿ ಪತಾಕಾಪಟದೊಳ್ ।
ಬರೆದಟ್ಟಿದನಂಧನೃಪತಿಗಂ ಸಿಂಧುಸುತಂ ॥ ೨ ॥

ಅಂತು ನಿಜನಾಮಾಂಕಿತ ಲೇಖಮಂ ಬರೆದು ನೊಮ್ಮ[ನೆಮ್ಮ] ನುಡಿದ ನುಡಿಯುಮಂತುಮೊಡಂಬಡುವನಲ್ಲಂ ನೀನುಂ ಗಾಂಧಾರಿಯುಮಿರ್ದು ಕುರುಕುಲಪ್ರದೀಪದುರ್ಯೋಧನನಂ ಕೌಂತೇಯರೊಳಿತ್ತಾನುಂ ಸಂಧಿಯುಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾೞ್ಪುದೆಂದು ಸಂಜಯನ ಕಯ್ಯೊಳ್ ಕೊಟ್ಟು ಧೃತರಾಷ್ಟ್ರನಲ್ಲಿಗಟ್ಟುವುದುಂ ಕುರುರಾಜಂ ಸಿಂಧುಸುತನ ಮೊಗಮಂ ನೋಡಿ,

ತುಂಗಕುರುವಂಶಮಯಶೋ- ।
ಭಂಗಂ ಛಿದ್ರತಮದೆನ್ನ ದೊಸಜೀನಾಯತ್ತ-॥
ನುಂ ಗಡ ಕುರುರಾಜನೆ ನೀ- ।
ನುಂ ಗಡ ಸಂಧಾನಮೇೞ್ದಿರೆನಗರಸುಗಡಾ ॥ ೩ ॥

ಈಯೆರ[1]ಡುಮೆನ್ನ[1] ನಿಡುದೋ-।
ಳಾಯತ್ತಂ ವೀರವೃತ್ತಿ ಜಯಮೆಂಬುದು ದೈ- ॥

1 ಡನೆನ್ನ 1—ಮು. ಪು. ಪಾ.

ನಾಯತ್ತಮಜ್ಜ ಭರತಾ–।
ನ್ವಯಕ್ಕೆ ಕಲಂಕಮಾಗದಂತಿರೆ ನೆಗೞ್ದಂ ॥ ೬ ॥

ಬೆಸಕೆಯ್ವಂ ಬಿಡಿಮಜ್ಜ ಮಂಗಳಮಹಾಶ್ರೀಸಂಧಿಕಾರ್ಯಕ್ಕೆ ಲಂ–।
ಘಿಸಿದೆಂ ನಿಮ್ಮಯ ಮಾತನೊರ್ಮೆಗೆ ಮಹಾಜ್ಞಾಲಂಘನಂ ದೋಷ
[2]ಮೊಂ– ॥
ದಿಸದಿ[2] ನ್ನಾಗ್ರಹಮಂ ಬಿಸುಟ್ಟಪೆನೆ ಸತ್ತ್ವಕ್ಕಂ ತದೇಕಾಂಗಸಾ ।
ಹಸಕಂ ವಿಸ್ಮಯಮುತ್ತು ಮೆಚ್ಚಿ ಪೊಗೞ್ದಂ ಮಂದಾಕಿನೀನಂದನಂ ॥ ೭ ॥

ಗುರುಭೀಷ್ಮಾರ್ಕಸುತಾದ್ಯಶೇಷಸುಭಟಾನೀಕಂ ವಿಸಿಕ್ತೇಷಮಾ ।
ಗಿರೆ ಕೌರವ್ಯವಿಶೇಷಕಂ ಚಲಿತನಲ್ಲೇಕಾಕಿ ಕುಂತೀತನೂ–॥
ಜರೊಳೆಂತುಂ ಪ್ರದುಮಾಬಿಲೊಲ್ಲನಿಱಿಯಲ್ಕೆಂದಿರ್ದಪಂ ಗಂಡನಿ– ।
ಪರಿಯೊಳ್ ಮೆಯ್ಗಲಿಯಾವನೆಂದು ಪೊಗೞ್ದಂ ಮಂದಾಕಿನೀನಂದನಂ
॥ ೮ ॥

ಅಂತು ಗಾಂಗೇಯಂ ಮನದೊಳ್ ಪೊಗೞ್ದು "ಅಶುಭಸ್ಯ ಕಾಲಹರಣ"ಮೆಂ[3]ಬೀ ಕಾರ್ಯಾರ್ಥ[3]ಮನವಧಾರಿಸಿ–ಮಗನೆ ನೀನೆಂತುಮೆಮ್ಮ ಪೇೞ್ದುದಂ ಕಯ್ಕೊಳ್ಳದೆ ಛಲಮನೆ ಕಯ್ಕೊಂಡು ಕೌಂತೇಯರೊಳ್ ಕಾದಲ್ಲದಿರೆನೆಂಬೆಯಪ್ಪೊಡೆ ತೀರ್ಥಯಾತ್ರೆಗೆ ಪೋದ ಬಲದೇವಂ ಬರ್ಪನ್ನೆಗಂ ನೀನಿರ್ದೆಡೆಯನಱಿಯದಂತು ಮೆಯ್ಗರೆದು ಅಶ್ವತ್ಥಾಮಕೃಪಕೃತವರ್ಮರ್ ಮೇಳಾಪಕ್ಕೆ ಬರ್ಪನ್ನೆಗಂ ಕಾಲವಂಚನಂಗೆ[4]ಯ್ಯೆಂದು ಪೇೞ್ದು[4]ಜಲಮಂತ್ರವಿದ್ಯಾಭ್ಯಾಸಮಂ ಕಯ್ಕೊಂಡು ಕುರುಕ್ಷೇತ್ರದುತ್ತರದಿಶಾಭಾಗದ ವೈಶಂಪಾಯನ ಸರೋವರಮಂ ಪೊಕ್ಕಿರ್ದು ಬಂದಿಸಿರುಳಂ ಕೞಿದು ನೀಂ ನಾಳೆ ನೆಗೞ್ವುದಂ ನೆಗೞ್ವೆನೆ ಮಹಾಪ್ರಸಾದಮೆಂದನೊಡಂ

1 ಗಮಿ1–ಮು. ಪು. ಪಾ.

2 ಮೊಡ್ಡಿಸುನಿ2–ಮು. ಪು. ಪಾ.

3 ಬ ವಾಕ್ಯಾರ್ಥ3–ಮು. ಪು. ಪಾ.

4 ಯ್ದುದು ಮೇಣ್ 4ಮು. ಪು. ಪಾ.

ಬಟ್ಟೆಸಂತೆಗೆಯ್ಸೆಸಂದು ಹಿತೋಪದೇಶಂಬೆರಸು ಜಲಮಂತ್ರೋಪದೇಶಮಂ ಕಯ್ಕೊಂಡು ಕುರುಕುಲಪಿತಾಮಹನಂ ಬೀಳ್ಕೊಂಡು ನಿಜಭುಜಗದಾಸಹಾಯನುಮಾಗಿ ಸಂಗ್ರಾಮಭೂಮಿಯೊಳ್ ಬರ್ಪಲ್ಲಿ ತನ್ಮಂತರ್ಗತಮೊಳ್ —

ದಿನಕರತನಯನ ದುಶ್ಶಾ-।
ಸನನ ವಿಯೋಗದೊಳ್[1] ವಿಂದು[1] ಪಡೆಗಂ ನೋಯ-॥
ಲ್ಕೆನಗಹಿತರೊಡನೆ [2]ಸಂಧಿಗೆ ।
ಮನೆ[2] ನೊಂದೆಂ ಸ್ವಜನಗುರುಜನಾಭ್ಯರ್ಥನೆಯಿಂ ॥ ೭ ॥

ಅರಿಗಳ್ ಪಾಂಡವರೊಳ್ ನಾಂ ।
ವಿರೋಧಮಂ ಬಿಸುಟು ಸಂಧಿಯಂ ಮಾಡುವುದೆಂ ॥
ಬರ ಮಾತಂ ಕೇಳಿಸಲೆ-।
ಸ್ನಿರದುಂ ಕಿವಿಗಳನವೇಕೆ ಬಿದಿ ಮಾಡಿದನೋ ॥ ೮ ॥

ಎಂದು ಕುರುಕುಲಪ್ರದೀಪಂ ತತ್ಸರೋವರಮನೆಯ್ದುವಂದಾಗಳ್—

ಒಂದೆರಡು ಮತ್ತರಂತರ-।
ದಿಂದಂ ಪೊಱಮಟ್ಟು [3]ಪಜ್ಜೆಯಿಂಸಲೆ ಕೊಳನಂ[3] ॥
ಪಿಂದುಪೆಱಗಾಗಿ ಪುಗೆ ಚಿಃ ।
ಎಂದವನಂ ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟಳ್ ॥ ೯ ॥

ತುಱುವಂ ಕಳಿಸುವ ಕೃಷ್ಣೆಯು ।
ಪಿಱಿಯುಂ ಪಿಡಿದುರ್ಜನೇಟ್ಟ ಕೊಳನಂ ಪಿಂದುಂ ॥
ಪೆಱಗಾಗಿ ಪುಗುವ ದುರ್ಣಯ-।
ಮುಱಿಪನೆ ಕೌರವನ ರಾಜ್ಯದಾ[4]ಯುದ [ಕುಂ]ದಂ[4] ॥ ೧೦ ॥

---

1 ಮಿನಿತು 1—ಮು. ಪು. ಪಾ.
2 ಪುದುವಾಳಿಕೆ 2—ಮು. ಪು. ಪಾ.
3 ಪಜ್ಜೆಯೆಂಬುದನೆನಿಸಲ್ 3—ಮು. ಪು. ಪಾ.
4 ಯುವಕೇಡಂ 4 ಮು. ಪು. ಪಾ.

ಅಂತು ಸರೋವರಮನೆಯ್ದಿವಂದಾಗಳ್ —

ಗಗನಂ ಬಿಟ್ಟುದೊ ಮೇಣ್ ನೆಲಕ್ಕೆ ನೆಲನೇಂ [1]ಪತ್ತಿತ್ತೊ[1] ಮೇಣೆಲ್ಲಿ ಪ- ।
ನ್ನಗವೃಂದಾರಕರಿಂದಮಿರ್ಪ ಬಿಲನೋ [2]ಮೇಣೆಲ್ಲಿ[2] ಜಿಹ್ವಾಗರಾ- ॥
ಜಿಗೆ ಮೆಯ್ಗಿರ್ಚಿಕೊಳಲ್ಕಜಂ ಸಮೆವ ತೋಯೋದ್ರೇಕಮೋ ಸಂದೆಯಂ ।
ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ ॥ ೧೧ ॥

ಅಂತು ಗಂಭೀರನೀರಾಕರಮಿರ್ಪಂತಿರ್ದ ಕಮಲಾಕರಮಂ ನೋಳ್ಪಲ್ಲಿ,—

ಕುರುಪತಿ ನಿನ್ನ ಪೊಕ್ಕ ತೊಱೆಗಳ್ ಮೊದಲಾಗಿಯೆ ಬತ್ತುತಿರ್ಪುವೀ- ।
ದೊರೆಯ ದುರಾತ್ಮನಂ ಖಳನನಾನೊಳಕೊಂಡೊಡೆ ಭೀಮನೀ ಸರೋ- ॥
ವರಮುಮನೆಮ್ಮುಮಂ ಕದಡುಗುಂ ಪುಗದಿರ್ ತೊಲಗೆಂದುಬಗ್ಗಿಪಂ- ।
ತಿರೆ ನೆಗೆದತ್ತನೇಕಬಕಕೋಕಮರಾಳವಿಹಂಗಮಸ್ವನಂ ॥ ೧೨ ॥

ವಳಿತ ಶಿಳೀಮುಖಮುತ್ಪಳ ।
ದಳನಯನಂ ಕಂಜರಂಜಿತಂ ಜಯಲಕ್ಷ್ಮೀ— ॥
ವಿಳಸಿತಮೆನೆ ದಿಟ್ಟಿಗೆ ಕೊಳು— ।
ಗುಳಮಂ ಪೋಲ್ತತ್ತು ಪೂಗೊಳಂ ಕೌರವನಾ ॥ ೧೩ ॥

ಆಗಳ್ ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮನಾ ವಿಶ್ವವಿಶ್ವಂಭರಾಧಃಕೂರ್ಮನಲ್ಲಿಯ ಕೂರ್ಮಂಗಳುಮನಾ ಭರತಕುಲಚಕ್ರೇಶ್ವರನಲ್ಲಿಯ ಚಕ್ರವಾಕಂಗಳುಮನಾ ಮತ್ಸ್ಯಲೋಚನನಲ್ಲಿಯ ಮತ್ಸ್ಯಂಗಳುಮನಾ ಪುರುಷವರಪುಂಡರೀಕನಲ್ಲಿಯ ಪುಂಡರೀಕಂಗಳುಮನಾ ಕುರುಕುಲಕುವಲಯಲಲಾಮನಲ್ಲಿಯ ಕುವಲಯಂಗಳುಮನಾ ಶಂಖಚಕ್ರಾಂಕಿತಚರಣನಲ್ಲಿಯ ಷಟ್ಚರಣಂಗಳುಮನಾ ಗಂಭೀರನಲ್ಲಿಯ ಗಂಭೀರಧ್ವನಿಯುಮನತಿಕುತೂಹಲಂಬೆರಸು ನೋಡುತುಂ ಬಂದು ತನ್ನ

1 ಪುಟ್ಟಿತ್ತೊ 1 ಮು. ಪು. ಪಾ.
2 ಮೇಣಪ್ಪ 2 ಮು. ಪು. ಪಾ.

ಮೆಯ್ಯೊಳ್ [1]ಕಱಂಗಿದ ನೇತ್ರರು[1] ಕರ್ಚಿ ಕಳೆದು ಕರಚರಣ ವದನಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುಳ್ದಾಚಮನಕ್ರಿಯೆಗಳಂ ನಿರ್ವರ್ತಿಸಿ ಜಲದೇವತಾನಮಸ್ಕಾರಂಗೆಯ್ದು ಜಲಮಂತ್ರದಿಂ ಜಲಮನಭಿಮಂತ್ರಿಸಿ—

[2]ನರಲೋಕಮನನುಭೋಗಿಸಿ ।
ಸುರಲೋಕದ ಸುಖಮನಾತ್ಮವಿಭವದೆ ತಳೆದಾ ॥
ಕುರುಪತಿ ವೈಶಂಪಾಯನ ।
ಸರಮಂ ಪುಗುವಂತೆ ನಾಗಲೋಕವ ಪೊಕ್ಕಂ[2] ॥ ೧೪ ॥

[3]ಉರುಪಕ್ಷಪಾತಮಧುರ ।
[ಸ್ವರಮಂ ಪ್ರಸಾಧಿತದಿಶಮುದ]ಚ್ಯುತನಂ ಧಾ- ॥
ಷುರ ಕಮಲಾಕರದೊಳ್ ಧಾ ।
ರ್ತರಾಷ್ಟ್ರನಂ ಪೋಲ್ತು ಧಾರ್ತರಾಷ್ಟ್ರಂ ಪೊಕ್ಕಂ[3] ॥ ೧೫ ॥

ಅಂತು ಕುರುಕುಲಮಹೀಪಾಲಂ ಮಧ್ಯಮಲೋಕಪಾಲನಾಗಿಯುಂ ಪಶ್ಚಿಮದಿಕ್ಪಾಲನಂತೆ ಜಲನಿಲಯನಾಗಿಯುಂ-

1 ಕೆನ್ನೈಸಿದ ಕೆನ್ನೆತ್ತರಂ 1—ಮು. ಪು. ಪಾ.

2 ನರಲೋಕಮನಟ್ಗೀಟಿಸಿ ।
ನರಲೋಕದ ಸುಖಮನಾತ್ಮವಿಭವದೆ ಪೊಕ್ಕಂ
ಕುರುಪತಿ ವೈಶಂಪಾಯನ ।
ಸರಮಂ ಪುಗುವಂತೆ ನಾಗಲೋಕಮನಾಗಳ್ ॥—2 ಮು. ಪು. ಪಾ.

3 ಗುರುಪಕ್ಷಪಾತದಿಂದಂ ।
ಗುರುಸ್ವರಂ ತತ್ಪ್ರಕಾಶಿತಾಂತಂ ಮಹಿಮೋ ॥
ದ್ಭುರುತರದಿಂ ಸರವರಮಂ ।
ಪಿರಿಯನಾಗಳ್ಪೋಲ್ತು ಧಾರ್ತರಾಷ್ಟ್ರಂ ಪೊಕ್ಕಂ ॥3 (ಮೈಸೂರು ಪ್ರತಿಯ ಪಾಠ)

ವಸರುಹವಿಷ್ಟರರ[1]ಗುಚಿತ[1]ರೇಚಕಪೂರಕಕುಂಭಕಕ್ರಿಯಾ ।
ಮನಮಿರೆ ಸತ್ಕ್ರಿಯೊಳ್ ದರಸಿಮೀಲಿತದೃಷ್ಟಿನಿವಿಷ್ಟನಾಗೆ ನಾ- ॥
ಗಿನ ತುದಿಯೊಳ್ ನಿರುದ್ಧಕರಮುಂ ನಿಲೆ ಮಂತ್ರಪದಾಕ್ಷರಂಗಳಂ ।
[2]ಜಿನುಗುತಲಿ[2]ರ್ದನಾ ಪರಮಯೋಗಿಯವೋಲ್ ಫಣಿರಾಜಕೇತನಂ
[illegible] ॥ ೧೫ ॥

ಅನ್ನೆಗಮತ್ತಲ್ ಶಲ್ಯನ ವಧೆಯಿಂಬಳಿಯಂ ದುರ್ಯೋಧನನ ರೂಪನೆಲ್ಲಿಯುಮರಸಿ ಕಾಣದೆ ವಿನಾನುವೊಂದು ಕಾರಣಮಾಗಲ್ವೇಟ್ಕು ಮೆಂದು ಧರ್ಮನಂದನಂ ಗರುಡಧ್ವಜನೊಳಾಳೋಚಿಸಿದುದಂ ಕುರು ಕುಳಾಂತಕಂ ಕೇಳ್ದು —

ತೊದಳಾಯ್ತೆನ್ನಯ ಪೂರ್ಣ್ದ ಪೂರ್ಣ್ಕೆ ಸಭೆಯೊಳ್ ಪಾಂಚಾಲರಾಜಾತ್ಮಜಾ- ।
ವದನವಮ್ಲಾನತೆ ಮಾಣ್ದುದಿ[3]ಲ್ಲ ಗಡ[3] ಮದ್ದೋರ್ದಂಡಕಂಡೂತಿ [4] ಮ- ॥
ಬ್ಬಿಗದುದಿಲ್ಲಿನ್ನು ಮೊಳಂ[4] ಸುಯೋಧನ[5] ನದರ್ಕೇ[5]ಗೆಯ್ವೆನಿಂತಕ್ಕುಮೆಂ- ।
ಬುದನಂದುತ್ಸುಕಚಿತ್ತನುಮ್ಮಳಿಸಿದಂ [6]ಕೌರವ್ಯ ಕೋಳಾಹಳಂ[6] ॥ ೧೬ ॥

ಅಂತುಮ್ಮಳಿಸಿ ಕುರುಕುಲಮಹೀಪಾಲನ ಬೃಹದೂರುಕ್ಕೈಲದ್ವಂದ್ವಂಗಳಂ ತನ್ನ ಗದಾದಂಡವಜ್ರದಂಡದಿಂ ಸುಗ್ಗುನುಜೀವಾಡಲುಂ ಆ ಕೌರವೇಶ್ವರನ ಬಾಹುಶಾಖೆಗಳಂ ತನ್ನ ಗದಾಕುಠಾರದಿಂ ಕತ್ತರಿಸದಿಯಲುಂ ಆ ಪಿಂಗಾಕ್ಷನ ವಿಶಾಲವಕ್ಷಸ್ಥಳಮಂ ತನ್ನ ಗದಾಲಾಂಗಲದಿಂದಿರ್ಬಗಿಯಾಗಿ ಪೋಟ್ಟು ಪರಿವಲುಂ ಆ ಫಣಿರಾಜಕೇತನನ ವಿಕಟ

1 ರುಚಿರ1–ಮು. ಪು. ಪಾ.

2 ಮಿನುಗುತು ಮಿ2–ಮು. ಪು. ಪಾ.

3 ಲ್ಲೊಗೆದ3–ಮು. ಪು. ಪಾ.

4 ತೀರ್ದುದುಮಿಲ್ಲಿನ್ನುಮಣಂ4–ಮು. ಪು. ಪಾ.

5 ವಧಕ್ಕೇ5–ಮು. ಪು. ಪಾ.

6 ಭೀಮಂ ಭವತ್ಕಾರ್ಯಮಂ6–ಮು. ಪು. ಪಾ.

ಲಲಾಟಶಿಲಾಪಟ್ಟಮಂ ತನ್ನ ಗದಾದಂಡದಿಂ ಚಿಪ್ಪುಚಿಪ್ಪಾರ್ದಿಡಲುಂ ಆ ದ್ರೌಪದೀದ್ರೋಹನ ಮಣಿಮಯಮಕುಟಮಂ ತನ್ನ ಗದಾಪ್ರಹರಣದಿಂದುರುಳ್ಚಿ ಪಾದಪ್ರಹಾರದಿಂ ಪುಡಿಯೊಳ್ ಪೊರಳ್ಚಲುಂ ಆ ಸುಯೋಧನನ ರುಧಿರಧಾರಾಪೂರದಿಂ ತನ್ನ ಧಗಧಗಿಯಮಾನವಿಸ್ಫುಲಿಂಗಕೋಪ ಪಾವಕಶಿಖಾಕಲಾಪಮನಾಜಿಸಲುಂ ಪಡೆಯದೆ ಕೋಪದಿಂ ಕಿಡಿಕಿಡಿವೋಗಿ ಭೀಮಸೇನಂ ವಿರಾಸೆಯಂ ಕಡಿದು—

ವಿರಾಜಿದ ಪಗೆವನ ಪಟ್ಟಂ ।
[ಪಾ][1]ಜಿಸುವೆನೊ ಪಬಿನ್ನಮಮರರುಂಡಮೃತಮನೇಂ ।
ಕಾಜಿಸುವೆನೊ ಖಚರರನಡ– ।
*ರ್ದೇಜಿಸುವೆನೊ ಮೇರುಗಿರಿಯ ತೂಜಲ ತುದಿಯುಂ ॥ ೧೭ ॥

ಎತ್ತುವೆನೊ ಮಂದರಾದ್ರಿಯ– ।
ನೊತ್ತುವೆನೊ ರಸಾತಳಕ್ಕೆ ನೆಲನಂ ದೆಸೆಯಂ ॥
ಪತ್ತುವೆನೊ ಪಗೆಯ ಬೆನ್ನಂ ।
ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ ॥ ೧೮ ॥

ದಾಂಟುವೆನೊ ಕುಲನಗಂಗಳ– ।
ನೀಂಟುವೆನೊ ಚತುಸ್ಸಮುದ್ರಮಂ ರವಿ[2]ದಿಶಿ[2]ಯಂ ॥
ವಿರಾಂಟುವೆನೊ ಗಗನತಳ[3][ದಿಂ][3] ।
ಗಂಟಲನೊತ್ತುವೆನೊ ಸಕಲದಿಕ್ಪಾಲಕರಂ ॥ ೧೯ ॥

ಅಂತು ಕುರುಕುಲಕೃತಾಂತಕನಂತಕನಂತೆ ಮಾಮಸಕಂಮಸಗಿ ಪ್ರಳಯಕಲ್ಪಸಂಕಲ್ಪಂಗೆಯ್ದು—

1 ಬಾ 1 ಮು. ಪು. ಪಾ.
2 ಶಶಿ 2 ಮು. ಪು. ಪಾ.
3 ಮಂ3–ಮು. ಪು. ಪಾ.

ರಸೆಗಿಟ್ಟಿದನೊ ಮೇಣ್ ನಾಲ್ಕುಂ ।
ದೆಸೆಗಳ ಕೋಣೆಗಳೊಳಟ್ಟಿದನೋ ಬಳಸಿಲ್ಲಿ ॥
ವಸುಮತಿಯೊಳ್ ಗಾಂಧಾರಿಯ ।
ಬಸಿಱಿಂ ಮೇಣ್ ಮಗುೞೆ ಪೋಗಿ ಪೊಕ್ಕಿರ್ದಪನೋ ॥ ೨೦ ॥

ಭುವನಂಗಳ್ ಪದಿನಾಲ್ಕು ನಾಲ್ಕು ಪೆಸರಿಂ ವಾರಾಶಿಗಳ್ ಪತ್ತು ದಿ ।
ಗ್ವಿವರಂ ನೋಟ್ಪೊಡಜಾಂಡ[1]ಮೊಂದೆ ಪೆಱತಿಂಬಿಸ್ಸಿಲ್ಲ[1]ಮಿನ್ನೆತ್ತಲೋ ॥
ಡುವನಾರಂ [2]ಕೆಳೆ[2]ಗೊಳ್ವನಾರ ಮಱೆಯಂ ಪೊಕ್ಕಿರ್ಪ[3]ನೆಲ್ಲಿರ್ಪನಿ ।
ನ್ನಿ[3]ವಱಿಂದಂ ಪೊಱಗೆಲ್ಲಿ ಪೊಕ್ಕು ಬ*ರ್ದುಕಲ್ಕಕ್ಕುಂ ಭುಜಂಗಧ್ವಜಂ ॥ ೨೧ ॥

ಚರಮುಚರಮೆಂಬ ಜಗದಂ ।
ತರದೊಳ್ ಬಳನೆಲ್ಲಿ ಪೊಕ್ಕೊಡಂ ತದ್ವಿಜಪಂ ॥
ಜರದೊ[4]ಳ್ ಪೊಕ್ಕೊಡೆ[4] ಹರಿಹರ ।
ಹಿರಣ್ಯಗರ್ಭರ್ಕ[5]ಳಾಂತೊಡಂ[5] ಕೊಲ್ಲದಿರೆಂ ॥ ೨೨ ॥

ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ಶಾತಮಾ ।
ರುತ ಕೇಳ್ ಮಾರುತಮಾರ್ಗ ಕೇಳ್ ಪಗೆವನಂ ಕೊಂದೆನ್ನ ಕೋಪಾಗ್ನಿಗಾ ।
ಹುತಿಮಾಡಿಪ್ಪೆಂ ಕೊಲಲಾಱದಂದು ತಱಿಸಂದಾನೆನ್ನ ಸಂದಗ್ನಿಗಾ ॥
ಹುತಿಮಾಡಿಪ್ಪೆಂ ಗಡಮೆಂದು ಪೂಣ್ದೊದಱಿದಂ ಕೌರವ್ಯಕೋಲಾಹಳಂ ॥ ೨೩ ॥

ಅಂತು ಪಂಚಭೂತಸಾಕ್ಷಿಯೊಳೆ ಪೂಣ್ದು ನಡೆದು ಅಜಾತಶತ್ರುಗೆ ಕುರುಕುಲಪ್ರಳಯನೆನಿಸಿದ ಸಾಹಸಭೀಮಂ ಸಾಷ್ಟಾಂಗಪ್ರಣಾಮಂಗೆಯ್ದು —

1 ಮಂಡಲದೊಳಿಂದಿಲ್ಲಿಲ್ಲ 1—ಮು. ಪು. ಪಾ.

2 ಗೆಡೆ 2—ಮು. ಪು. ಪಾ.

3 ನಿಂದಿಂತಿದಂತಿ 3—ಮು. ಪು. ಪಾ.

4 ಳಗಿರ್ದೊಡೆ 4—ಮು. ಪು. ಪಾ.

5 ಳಲ್ಲಿಯುಂ5—ಮು. ಪು. ಪಾ.

ಎನಿತುಂ ದ್ರೌಪದಿ ಮುಕ್ತಕೇಶಿ ನವೆವಳ್ ತದ್ದುಃಖಮಂ ಕಂಡು ಕಂ-।
ಡೆನಿತುಂ ಸೈರಿಪೆವಾನುಮೆನ್ನನುಜರುಂ ಪಾಂಚಾಲಿಯುಂ ನೋಡಿ ನೀಂ ॥
ಮನದೊಳ್ ನೋವುದುಮಿಲ್ಲ ನಿಷ್ಕರುಣೆಯಾಯ್ ನೀನಿಂತಿರಾನೆನ್ನಗಂ ।
ಮುನಿಸಂ ತೀರ್ಚೆ ನರೇಂದ್ರ ವೈರಿತರುವಂ ನಿರ್ಮೂಲನಂ ಮಾಡುವೆಂ ॥೧೪॥

ಆನುಂ ವಿಧೇಯನಲ್ಲೆಂ ।
ನೀನುಂ ಗುರುವಲ್ಲಮಿಂದಿನೊಂದೆವಸಂ ಧಾ- ॥
ತ್ರೀನಾಥ ಪರಿಯ ಬಿಡ ಕುರು ।
ಸೂನುವನಾನಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ ॥ ೧೫ ॥

ಮುಂದಲೆಯಂ ಪಿಡಿದೆನ್ನಯ ।
ಮುಂದೆೞೆದನಲಜೆಯನಂದು ಪರಿಭವಿಸಿಯೆ ದ- ॥
ರ್ಪಿಂದುರಿದು ಸೊರ್ಕಿದವನಂ ।
ಕೊಂದೆಂ ಕುರುಪತಿಯನಿಂ ಕೊಲಲ್ ತಡೆದಪೆನೇ ॥ ೧೬ ॥

ಎಂದು ಕುರುಕುಲಾಂತಕಂ ಕುರುಕುಳವಿಳಯಕೇತುದಂಡಭೀಕರ ಕ್ರೋಧಬದ್ಧಾನುಕಾರಿತಮುಖನುಂ ಗಾಂಧಾರೀನಂದನಸಂಹರಣೋನ್ಮೀಲಿತಕರಾಳದಂತದಷ್ಟೋಷ್ಠವಿಕಟಬದ್ಧಭ್ರುಕುಟಿಭಂಗಭೀಷಣಲಲಾಟಪಟ್ಟನುಂ ಕುರುವಂಶದಿಶಾಪಟ್ಟನುಂ ಸಂಧ್ಯಾರಾಗಸನ್ನಿಕಾಶದುರ್ನಿರೀಕ್ಷ್ಯಕಟಾಕ್ಷವಿಕ್ಷೇಪಲಕ್ಷಿತನುಂ ಪಿಂಗಾಕ್ಷಮಾರಣಕಾರಣನುಂ ಉತ್ಪನ್ನಮಹೋತ್ಸವಚಲಾಯಮಾನಸ್ಫುರದಂಘ್ರಿಯುಗ್ಮನುಂ ಕುರುಕುಲಪ್ರಳಯಜಲಧರನಿನಾದಗಂಭೀರೋದ್ದಾಮಸಿಂಹನಾದಪ್ರತಿಮಪ್ರತಿಜ್ಞಾಪ್ರಚಲಿತನಿಖಿಲದಿಕ್ಚಕ್ರವಾಳನುಂ ಸುಯೋಧನಾನುಜರುಧಿರೋದ್ಗಾರಿನಿಶ್ಶೇಷನುಮಾಗಿ ದುರ್ಯೋಧನವಿಶೇಷಾನ್ವೇಷಣಾರ್ಥಂ ಮಾನುಸಕಂಮುಸಗಿ ಕುರುಕುಲಪ್ರಳಯಕಾಲದಂಡಮೆನಿಸಿ ನಿಜವಿಜಯಗದಾದಂಡಮನೆತ್ತಿಕೊಂಡು—

ಕುರುಕುಲಕದಳೀಕಾನನ ।
ಕರಿಕಳಭಂ ಶತ್ರುಶಲಭಸಂಪಾತನವಿ- ॥

ಸ್ಫುರಿತಪ್ರದೀಪನಾ ಕುರು ।
ಧರೆಯೊಳ್ ಕುರುಪತಿಯುಂ ಸಜಿಸಿದಂ ಪವನಸುತಂ ॥ ೨೨ ॥

ಗುರುಲಕ್ಷ್ಯಸಿದ್ಧಿಯಿಲ್ಲೆನೆ ।
ಪರಿವಂಬಂ ಪರಿದು ಪಿಡಿದು [1]ತರ್ಪಂತಿರೆ ಪಾ- ।
ಣ್ಬೆರದೆ ಮರುಜ್ಜವದಿಂದಂ ।
ಮರುತ್ಸುತಂ ಪರಿದನಾಗಳಿದಿರುಂ[1] ಬೞಿಯುಂ ॥ ೨೩ ॥

ಅಂತಿದಿರುಂ ಬೞಿಯುಂ ಪಾಸುಂ ಪ್ರೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ[2][ತಿಡ್ಡಮುಂ][2] ಪರಿದು ಕುರುಕ್ಷೇತ್ರದೊಳ್ ವಜ್ರಪ್ರಹರಣದಿನೆಱಂಕೆವೆರಸು ಕೆಡೆದ ಪರ್ವತಂಗಳಂತೆ ಲೋಹಪಕ್ಕರಿಕೆಗಳ್ವೆರಸು ಕೋಡನೂಱ್ ಪಾಡೞಿದು ಪರಕಲಿಸಿ ಕೆಡೆದ ಮದಾಂಧಗಂಧಸಿಂಧುರಂಗಳಡಿಯೊಳಡಂಗಿದನೆಗೆತ್ತು ಕೈಗುತ್ತಿ ನೋಡಿಯುಂ ತನ್ನ ಭೀಕರಗದಾಘಾತದೊಳಂ ಜಾಱಿ ಪಱಿವಱಿದು ತೂಱುಪಾಱಾದ ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೊಳಡಂಗಿದನೆಗೆತ್ತು ಬಳಸಿ ಬಲವಂದು ನೋಡಿಯುಂ ತನ್ನ ನಿಶಿತನಾರಾಚಪರಂಪರಾಭಿಘಾತದೊಳ್ ತಗ್ಗಿಱಂ ಮುಂದೆ ಕೆಡೆದಿರ್ದ ತೇರ ಪಲಗೆಗಳೊಳ್ ಮುಯ್ಗುರಿದನೆಗೆತ್ತು ಬೆದಂಕೆ ನೋಡಿಯುಂ ತನ್ನ ನಿಷ್ಠುರಚರಣಸಂಘಟ್ಟದೊಳಂ ಪಡಲ್ವಟ್ಟ ವೀರಭಟರ್ಕಳ ಮಕುಟಂಗಳೊಳ್ ತಲೆಗರೆದನೆಗೆತ್ತು ಸೋದಿಸಿ ನೋಡಿಯುಂ ನೆತ್ತರ ತೊಱೆಗಳೊಳ್ ಕಾಲ್ಗುತ್ತಿ ನೋಡಿಯುಂ ನೆಣನ ಬಣಂಬೆಗಳೊಳಗೆ ಕೈದುಗುತ್ತಿ ನೋಡಿಯುಂ ಅಡಗಿನ ಗಿಡಿವಿನೊಳ್ ಸುೞಿದು ನೋಡಿಯುಂ ನರವಿನ ಸೆಱೆವಿಯೊಳ್ ತೊಡಲ್ದು ನೋಡಿಯುಂ ಮೂಳೆಯ ಮೊರಡಿಗಳನೇಱಿ ನೋಡಿಯುಂ, ಮಿದುಳ ಕೋೞ್ಗೆಸಱೊಳ್ ಪ್ರೊಕ್ಕು ಕರುಳ ಮೊಪೆಯುಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ ಅಟ್ಟೆಯ ಬೆಟ್ಟಘಟ್ಟದಟ್ಟೆಡೆಗಳೊಳ್ ನಿಟ್ಟಿಸಿಯುಂ ವೈಯಾಕರಣ-

1 ಬೇಗಂ ತರ್ಪಂತಿರೆ ಪವನಜವಪೆ ಪವನಜ ಪರಿದಂ ಮಾಣ್ದಿರದೆಯುಮ್ಮಳಿದಿರುಂ 1—ಮು. ಪು. ಪಾ.
2 ತಿಗಟಮುಂ 2—ಮು. ಪು. ಪಾ.

ನಂತೆ ಶಬ್ದಮನಾಲಿಸಿಯುಂ ಚೇಂಟಿಕಾಜನಂತೆ ಅಡಿವಜ್ಜೆಯನಱಿಸಿಯುಂ ಗರುಡನಂತೆ ಹಾವಿನ ಹೞವಿಗೆಯನಾರಯ್ದು ನೋಡಿಯುಂ ವೈದ್ಯನಂತಹಿತಗದಾನ್ವೇಷಣಂಗೆಯ್ದು ನೋಡಿಯುಂ ಮುನ್ನಂ ಪರಶುರಾಮನಿೞೆ ನೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂಳ್ವರೆಗಂ ಪಿಳ್ಳೆವೆಸರಿಲ್ಲದಂತು ಕೊಂದವಂದಿರ ನೂರೆನೆತ್ತರೊಳ್ ತೀವಿ ತನ್ನ ತಾಯ್ಗೆ ನೀರೀಯಲುಂ ತಂದೆಗೆ ನೀರ್ಗುಡಲುಮೆಂದು ಮಾಡಿದ ಸ್ಯಮಂತಪಂಚಕಂಗಳೆಂಬ ಪೆಸರ ಪೆರ್ಮಡುಗಳೊಳಗೆ ಮೂಡಿ ಮುೞ್ಕಾಡಿ ನೋಡಿಯುಂ ನಾಲ್ವತ್ರಿಣ್ಣಾವ್ರದಪರಿಪ್ರಮಾಣಕುರುಕ್ಷೇತ್ರದೊಳೆಲ್ಲಿಯುಂ ದುರ್ಯೋಧನನಂ ಅಱಸಿ ಕಾಣದೆ ವಿಸ್ಮಯಂಬಟ್ಟವನ ಬಿಟ್ಟಬೀಡಿಂಗೆ ಸಿಟ್ಟುಗೊಂಡು —

ಜತುಗೃಹದೊಳ್ ಸುಡಲ್ ಬಗೆದನೆಲ್ಲಿದನಿಕ್ಕೆ ವಿಷಾನ್ನಮಂ ಮರು- ।
ತ್ಸುತನನುಪಾಯದಿಂ ಕೊಲಲೊಡರ್ಚಿದನೆಲ್ಲಿದನಾ ದುರೋದರ ।
ವ್ಯತಿಕರದೊಳ್ ಪರಾಭವಿಸಿ ಕೃಷ್ಣೆಯನುಯ್ದ ಪರಾಧಿಯೆಲ್ಲಿದಂ ।
ಕೃತಕಸಭಾಪ್ರವೇಶಕರನೆಲ್ಲಿದನೆಲ್ಲಿದನೋ ಸುಯೋಧನಂ ॥ ೧೯ ॥

ಧೃತರಾಷ್ಟ್ರಪುತ್ರ[1]ನಬ್ಜ[1]ಪ್ರಿಯಸುತಸಖನೇಕಾದಶಾಕ್ಷೋಹಿಣೀಶಂ ।
ಕೃತಕದ್ಯೂತಸ್ವನಾಥೀಕೃತಯಮಸುತಭೀಮಾರ್ಜುನಂ ದ್ರೋಣಭೀಷ್ಮಾ-
ಚಿತವಾಕ್ಯದ್ವೇಷಿ ಕೃಷ್ಣಾಂಬರಕಬರಿಹರಂ ಶೋಕತೀವ್ರಾಗ್ನಿದಗ್ಧಂ ।
ಸುತಶೋಕಾಕ್ರಾಂತನೆಲ್ಲಿರ್ದನೊ ನೃಪತಿಲಕಂ ನಿಮ್ಮ ರಾಜಾಧಿರಾಜಂ ॥ ೨೦ ॥

ಭರತಕುಲೇಂದುಕಲಂಕಂ ।
ಭರತಾನ್ವಯ ರಾಜಭವನರಾಜಕಪ್ರೇತಂ ॥
ಕುರುಕೇತುವೆಲ್ಲಿದಂ ತ- ।
ತ್ಕುರುಕುಲಲಯಕೇತು ಭೀಮಸೇನಂ ಬಂದಂ ॥ ೨೧ ॥

ಎಂದು ಶಿಬಿರರಕ್ಷಕರ ಗರ್ಭಮುಂ ಶಿಬಿರನಿತಂಬಿನಿಯರ ಗರ್ಭಮುಂ ಒಡನೊಡನೆ ಗಳಿಯಿಸೆ ಸಿಂಹಗರ್ಜನೆಯಿಂ ಗರ್ಜಿಸಿ ಕುರುರಾಜದ್ವಾರೋಪಾಂತಮನೆಯ್ದೆವಂದಾಗಳ್ —

1 ಕಂಜ 1 ಮು. ಪ್ರ. ಪಾ.

ಆರಾರ್ ಸತ್ತರ್ ಸಮರದೊ- ।
ಳಾರಾರೊಳರಿನ್ನ ಸೂನುಗಳ್ಗೇನಾಯ್ತೆಂ- ॥
ದಾರಯ್ಯಲ್ ನೃಪಭವನ ।
ದ್ವಾರದೊಳಿರ್ದ ಹಿತಜನನಿ ಪರಿಜನಸಹಿತಂ ॥ ೩೨ ॥

ದೆಸೆಯಂ ತೆಕ್ಕನೆ ತೀವಿ ಪರ್ಬಿ ಗಗನಂ ಕೂಡಿಟ್ಟವೊಲ್ ಸೀಳ್ದಗು- ।
ರ್ವಿಸೆ ಬಾಹುಭ್ರಮಿತಾಭ್ರವಿಭ್ರಮಗದಂ ಕೌರವ್ಯರಂ ಕೊಂದ ರ- ॥
ಕ್ಕಸನೋ [1][ಭೀಮನೊ ಈತನಾವ][1]ನೆನುತುಂ ಗಾಂಧಾರಿ ಬಳ್ಕುತ್ತೆ ಜ- ।
ಕ್ಕಸಮುತ್ತಳ್ ಬರೆ ಕಂಡು ಪಾಂಡವಬಲಪ್ರಾಕಾರನಾಕಾರಮಂ ॥ ೩೩ ॥

ಅಂತು ಕಂಡು ಬಿಲ್ಲುಂಬೆಱಗುವಾಗಿ—

ಎನ್ನಾತ್ಮಜರಂ ನೂರ್ವರು- ।
ಮನ್ನುಂಗಿದ ತೇಜದೆ ನುಂಗೆ ಬಂದಂ ಭರದಿಂ ॥
ಪನ್ನಗಕೇತನನುಮನಿಂ- ।
ತನ್ನೆಯಮಾಯ್ತೆಂದು ಪಿರಿದುಮುಮ್ಮಳಿಸುತ್ತುಂ ॥ ೩೪ ॥

ಎಂಬನ್ನೆಗಂ ವಿಜೃಂಭಿಸಿ ಕಯ್ಪ್ರಸರದಿಂ ಗುರುಜನಕ್ಕೆ ಸಮುಚಿತಾಚಾರಮಂ ಮೆಱೆದು ಭೀಮಂ ಭೀಮನಾದಮಂ ನೆಗೞ್ಚಿ—

ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ ಕೊಂದೆಂ ಭವ- ।
ತ್ಸುತರಂ ನೂರ್ವರುಮಂ ಗದಾಪ್ರಹತಿಯಿಂ ದುಶ್ಶಾಸನೋರಃಸ್ಥಳ- ॥
ಕ್ಷತಜಾಸೃಗ್ಜಲಸೇಕದಿಂ ತಣಿಸಿದೆಂ ಕೋಪಾಗ್ನಿಯಂ ಬಂದೆನು- ।
ದ್ಧತನಂ ಕೋಪಕೃತಾಪರಾಧಶತನಂ ನುಂಗಲ್ಕೆ ಪಿಂಗಾಕ್ಷನಂ ॥ ೩೫ ॥

ಎಂಬುದುಂ ಗಾಂಧಾರಿ ಜರಾಸಂಧಾರಿಗೆ ಬದ್ಧಾಂಜಲಿಯಾಗಿ—

ಅನಿಬರ್ ತನಯರ ದುಃಖಮ- ।
ನನುಭವಿಸಿಯುಮಣಮೆ ಪೋಗವೆಮ್ಮಸುಗಳ್ ನೀ- ॥

1 ಈತನೊ ಭೀಮಸೇನ 1 ಮು. ಪು. ಪಾ.

ನಿನಿತನೆಮಗೊಳ್ಳಿಕೆಯರ್ ಭೀ- ।
ಮಂ ನುಂಗುಂ ಮುನ್ನೆಮ್ಮನೆಮ್ಮ ಸುತನಂ ಬೞಿಯಂ ॥ ೩೬ ॥

ಎಂಬುದುಮಂಧರಾಜಂಗೆ ಪವನತನೂಜನಭಿಮುಖನಾಗಿ—

ಕುರುಸುತ ಕುರುಕುಲವರ್ಧನ ।
ಕುರುಭೂತಳವಿಪಿನದೊಳಗೆ ಕುರುಶಾರ್ದೂಲಂ ॥
ದೊರೆಕೊಳೆ ನಿನ್ನಯ ಬೞಿಯಂ ।
ಪೊರಳ್ಚಿಕೊಲಲೆಂದು ಬಂದ ಭೀಮಕಿರಾತಂ ॥ ೩೭ ॥

ಎಂಬುದುಂ ಅನ್ನೆಗಂ ತ್ವರಿತಗತಿಯಿಂ ವಿಂಧ್ಯಕಜಾಲಕರೆಂಬ ಕಿರಾತದೂತರ್ ಬಂದು ದೂರಪ್ರಣತರಾಗಿ—ದೇವಾ ದುರ್ಯೋಧನನಂ ಕುರುಕ್ಷೇತ್ರದೊಳೆಲ್ಲಿಯುಮರಸಿ ಕಾಣದೆ ಮಧ್ಯಂದಿನ ಸಮಯದೊಳ್ ಲಲಾಟಂತಪನಾದ ತಪನತಾಪದಿಂ ತೃಷ್ಣಾಭಿಭೂತರಾಗಿ ಸಕಲಜನಾಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಿಯಲೆಂದು ಪೋಗಿ ಪಲಕುಲಿಶಕಮಲಶಂಖಚಕ್ರಲಾಂಛನಮಪ್ಪಡಿವಜ್ಜೆಯಂ ಕೊಳದ ತಡಿಯೊಳ್ ಕಂಡೆವಲ್ಲಿ ಪೊಱಮಟ್ಟಪಜ್ಜೆಯಲ್ಲದೆ ಪೊಕ್ಕಪಜ್ಜೆಯಂ ಕಾಣೆವೆನೆ ಪವನತನಯನವರನೊಡಗೊಂಡು ಬಂದು ಧರ್ಮತನಯಾದಿಗಳ್ಗೆ ತದ್ವೃತ್ತಾಂತಮನೆಲ್ಲಮನಱಿಪೆ ಯುಕ್ತಾಯುಕ್ತಮಪ್ಪ ದೂತರ ಮಾತಂ ಸಕಲಜಗದುತ್ಪತ್ತಿಸ್ಥಿತಿಪ್ರಳಯಪ್ರಭುವೆನಿಸಿದ ವಿಷ್ಣು ಕೇಳ್ದು ಮನದೊಳವಧಾರಿಸಿ—

ದ್ಯುನದೀಜಂ ಕುಡೆ ತೋಯಮಂತ್ರಬಲದಿಂ ಪೊಕ್ಕಿರ್ದಪಂ ಕಾಲವಂ- ।
ಚನೆಗೆಯ್ಯಲ್ ಕೊಳನಂ ಹಲಾಯುಧಕೃಪಾಶ್ವತ್ಥಾಮರುಂ ನಾಗಕೇ- ॥
ತನನೊಳ್ ನಾಳೆಯುಂ ಕೂಡಿ ಬರ್ಪರವರಿನ್ನುಂ ಬಾರದನ್ನಂ ಸುಯೋ- ।
ಧನನಂ ಮುನ್ನಮೆ ಕಯ್ಗೆ ಮಾೞ್ಪುದು ಬೞಿಕ್ಕಾಗರ್ಗಂ ಗೆಲಲ್ ಬರ್ಕುಮೇ ॥ ೩೮ ॥

ಅದಱಿಂದೀಗಳೆ ಪೋಗಿ ಪೂಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ [1]ಪರಿಭವಿಸುವು[1]ದೆಂದರವಿಂದನಾಭಂ ಧರ್ಮ

1 ಪಱಿವಡಿಪು 1—ಮು. ಪು. ಪಾ.

ನಂದನಾದಿಗಳನೊಡಗೊಂಡು ಬಂದು ಕಿರಾತದೂತಸಂಸೂಚಿತಸಂಕೇತಮನಲ್ಲಿ ಕಂಡು ದುರ್ಯೋಧನನದಿವಕ್ಷೆಯುಪ್ಪ್ರದಂ ತಪ್ಪಿಲ್ಲದಱಿದು ನಿಸ್ಸಂದಿಗ್ಧಚಿತ್ತನಾಗೆ—

[1] ಭರತಜರೊಳ್ ಮುನ್ನಿಲ್ಲದ ।
ಪರಿಭಾಷೆಯನುಂಟುಮಾಡಿ[1] ಪೆಱಗಡಿಯಿಟ್ಟಂ ॥
ಕುರುರಾಜನೆಂದು ಲಜ್ಜಾ ।
ಭರದಿಂದಂ ತಲೆಯನೆಱಗಿದಂ ಧರ್ಮಸುತಂ ॥ ೪೯ ॥

ಎಂದು ಧರ್ಮನಂದನಂ ದುರ್ಯೋಧನನ ದುರ್ಯಶಸ್ಸಿಗೆ ತಲೆವಾಗಿ

ವಿರುವತ್ಸಾರಸರಾಜಹಂಸರವದಿಂದೇಂವಂದಿರೇ ಬನ್ನಿಮಿಂ—।
ತಿರಿಮೆಂದಾದರಿಪಂತುಟಾಯ್ತು ಪವನೋದ್ಧೂತೋತ್ತರಂಗಾಂಬುವಿಂ ॥
ತರದಿಂ ಕಾಲ್ಗೆಱಪಂತುಟಾಯ್ತು ವಿಕಸತ್ಪಂಕೇಜದಿಂ ಪಂಕಜಾ— ।
ಕರಮರ್ಘ್ಯಂಗುಡುವಂತುಟಾಯ್ತನಿಲಜಂಗಭ್ಯಾಗತಪ್ರೀತಿಯಿಂ ॥ ೫೦ ॥

ಭಾವಿಸೆ ಪೋಲ್ತುದು ನಾಳಂ ।
ಕಾವನೆ ಕರ್ಣಿಕೆಯೆ ಕಳಸಮನೆ [2]ಮರಕತಪ— ॥
ತ್ರಾವಳಿ ವಿಳಸಿತದಿಂ[2] ಜಲ ।
ದೇವಿಯ ಸಿಂಧಾತಪತ್ರ[3]ಮನೆ ಶತಪತ್ರಂ[3] ॥ ೫೧ ॥

ಕಡೆಯ ದಳಂಗಳೆ ವಜ್ರಂ ।
ನಡುವಣ ಕರ್ಣಿಕೆಯೆ ಕೇವಣಂ ಕೇವಣದೊಳ್ ॥
ತೊಡರ್ದ*ಳಿ ನೀಲದ ಪರಲೆನೆ ।
ನೃಪರಿಪ್ರಮುದ್ರಿಕೆವೊಲಾಯ್ತು ಕನಕಾಂಬುರುಹಂ ॥ ೫೨ ॥

1 ಚರದೊಳ್ ಮುನ್ನಿಲ್ಲೆಂಬೀ ಪರಿಹಾಸಮನುಂಟುಮಾಡಿ 1—ಮದ್ರಾಸು ಪ್ರತಿಯ ಪಾಠವು.
2 ಮಧುಕರ ಕಮಲಾವಳಿ ರಂಧ್ರಿಕೆಯೆನೆ 2—ಮದ್ರಾಸು ಪ್ರತಿಯ ಪಾಠವು.
3 ಮಿನಿಸಿದುದಾಗಳ್ 3—ಮದ್ರಾಸು ಪ್ರತಿಯ ಪಾಠವು.

ಮರುದಾಂದೋಳಿತಜಂಬೂ ।
ತರುಶಾಖಾ [1]ಹಸ್ತ[1]ಕಿಸಲಯಂ ಮಿಳಿಮಿಳಿರು- ॥
ತ್ತಿರೆ[2] ಸನ್ನೆಗೆಯ್ದು ತೋರ್ಪಂ- ।
[2][ರಲೆಸೆದುವು ಪವನ][2]ಜಂಗೆ ದುರ್ಯೋಧನನಂ ॥ ೪೩ ॥

ಭವವಹಿತನಿಲ್ಲಿದಂ ಕೌ- ।
ರವಾರಿ ನೋಡೆಂದು ಮೂಡಿ ಮುಬ್ಬ್ಯಾಡಿಪು ತೋ- ॥
ರ್ಪವ್ರೊಲಲ್ಲಿ ಮೂಡಿ ಮುಬ್ಬ್ಯಾ- ।
ಡುವ ವಿಹಗಾವಳಿಗಳಿಂ ಮುಸಂಗೊಳಿಸಿದುವ್ರೋ ॥ ೪೪ ॥

ಮಿಂಗುಲಿಗವಕ್ಕಿ ಕೊಳನೊಳ್ ।
ಮಿಂಗೆಜಗುವ ತೆಜದಿನೆಜಗಿ ನೋಡಿಲ್ಲಿರ್ದಂ ॥
ಪಿಂಗಾಕ್ಷನೆಂದು ಪವನಸು- ।
ತಂ[3]ಗಜಿಪುವ ತೆಜದಿ[ನಂತದೇಂ][3] ಸೊಗಯಿಸಿತೋ ॥ ೪೫ ॥

ಮರುದಾತ್ಮಜ ನಿಜರಿಪು ತಲೆ- ।
ಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂ- ॥
ತಿರೆ ಪೊಳೆದು ತೋರ್ಪ ಜಲಚರ ।
ಪರಿಕರವಾಜಿಪಿದುವು ತಾಮೆ ದುರ್ಯೋಧನನಂ ॥ ೪೬ ॥

ಬಳಗಾಡಂ ಪಗೆವಂ ಸರೋವರೊದೊಳಿರ್ದನ್ನಿತ್ರವೋಪಂ ಸರೋ- ।
ಜಳಮಂ ಮುಂತವೆ ಪೀರ್ದು ಪೀರ್ವೆನಸುಹೃದ್ರಕ್ತಾಂಬುವಂ ತೋರ್ಪೆನೆ- ।
ಸ್ಖಳವಂ ಮುತ್ಪತಿಗೆಂದು ಸಂತಸದೆ ಬಾಹಾಸ್ಫಾಲನಂಗೆಯ್ದು ದಿ- ।
ಗ್ವಳಯಂ ಮಾರ್ದನಿಯಿಟ್ಟವೊಲ್ ಗಜಜಿದಂ **ಚಾಳುಕ್ಯಕಂಠೀರವಂ**
॥ ೪೭ ॥

1 ಹಾಸ1—ಮು. ಪು. ಪಾ.

2 ಸರದೊಳ್ ತೋಜಿಲ್ಕೆಂ ಕರೆವವೊಲಾಯ್ತನಿಲ2—ಮು. ಪು. ಪಾ.

3 ಗರ್ಜಡೆದೋರ್ಪತೆಜದಿನೇಂ 3—ಮು. ಪು. ಪಾ.

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯ**ಚಕ್ರವರ್ತಿಶ್ರೀಸಾಹಸಭೀಮವಿಜಯದೊಳ್** [1]**ಕೌರವಸರೋವರಪ್ರವೇಶವರ್ಣನಂ**[1] ಷಷ್ಠಾಶ್ವಾಸಂ ಸಂಪೂರ್ಣಂ



1 ಭೀಮಸೇನಾಡಂಬರವರ್ಣನಂ1—ಮು. ಸು. ಪಾ.

## ॥ ಸಪ್ತಮಾಶ್ವಾಸಂ ॥

ಶ್ರೀರಮಣೀರಮಣಂ ಪೃಥು- ।
ಳೋರಸ್ಸ್ಥಳಸಹಿತಕುಂಭಿಕುಂಭಸ್ಥಳಸಿ- ॥
ದಾರಣಪಟುಭುಜದಂಡಂ ।
ದಾರುಣಕೋಪಂ ಪ್ರತಾಪಿಸಾಹಸಭೀಮಂ ॥ ೧ ॥

ಆಗಳಾ ಕೊಳನ ಬಳಸಿಂಗೆ ಬಂದು ನಿಬ್ಬರವಾಗೆ ಬೊಬ್ಬಿಱಿದಬ್ಬರಂಗೆಯ್ದು ಪಲತೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ ಭೇರಿಗಳಂ ತಾಟಿಸಿಯುಂ ಕಹಳೆಗಳನೊತ್ತಿಸಿಯುಂ ಪಂಚಮಹಾವಾದ್ಯಂಗಳಂ ಬಾಜಿಸಿಯುಂ ಎಂತುಂ ಪೊಱಮಡಿಸಲಾಱದಿರೆ ಸುಯೋಧನನಂ ಪೆಸರ್ಗೊಂಡು ನಕುಲನಾಸ್ಫೋಟಿಸಿ—

ಅಂಕದ ಕಲಿ ಕುರುವಂಶಶ- ।
ಶಾಂಕನೆ ದುರ್ಯೋಧನಾಂಕನೆನೆ ನೆಗಟ್ದ*ಯಶಃ- ॥
ಪಂಕದೊಳವಿೞ ಸರೋವರ ।
ಪಂಕದೊಳಂ ನೀನೆ ನಿನ್ನನಿಂತರ್ದುವರೇ ॥ ೨ ॥

ಇಱಿವಬೆಡಂಗನೊಳಿಱಿಯಲ್ ।
ನಱೆಯುಯರ್ ನಿನಗಾನೆ ಸಾಲ್ವೆನಿಕ್ಕುತುಳಕ್ಕಂ ॥
ನೆಱೆದಿರ್ದನಿರದೆ ಕೊಳನಂ ।
ಪೊಱಮಡು [1][ನೀಂ ತೋರ್ಪೆನೆನ್ನ][1] ಕೊಂತದ ಸವಿಯಂ ॥ ೩ ॥

ಎನೆ ಸಹದೇವ[2]ನಾಸ್ಫೋಟಿಸಿ[2] —

1 ತೋಱಿದಪೆನೆನ್ನ 1–ಮು. ಪು. ಪಾ.

2 ನುತ್ಕಟಿಸಿ 2–ಮು. ಪು. ಪಾ.

ಎಂದಿಂಗೆ ನಿನಗೆ ಸಾವಿ— ।
ಳ್ಳೆಂದಿರ್ದಯ್ ನಿನ್ನ ಮನದೊಳಿನ್ನವರಂ ನೀ— ॥
ನೊಂದಂ ಬಗೆದಿರೆ ವಿಧಿ ತಾ— ।
ನೊಂದಂ ಬಗೆದತ್ತು ಸಕಲಕುರುಕುಲಕೇತೂ ॥ ೪ ॥

ಜವನ ಮಗನಿರ್ಕೆ **ಸುಭಟರ** ।
**ಜವನಿರ್ಕೆ** ಸಿತಾಶ್ವನಿರ್ಕೆ ನಕುಲನುಮಿರ್ಕೆ— ॥
ಣ್ಮುವೊಡೆನ್ನ ಬಾಳಸವಿಯುಂ ।
ಸವಿನೋಡಿ ಬೞಿಕ್ಕೆ ನೀರಸವಿಯುಂ ನೋಡಾ ॥ ೫ ॥

ಎಂಬುದುಮರ್ಜುನಂ ವಿಜೃಂಭಿಸಿ—

ಮಾನಧನನೆನಿಸಿ ನಿನ್ನಭಿ— ।
ಮಾನಕ್ಷತಿಮಾಡಿದಯ್ ಸುಯೋಧನ ನೀಂ ಮು— ॥
ತ್ತೀ ನೀರೊಳಗೆಸೆದಿರ್ಕುಂ ।
ಮೀನಿರ್ಕುಂ ಕಪ್ಪೆಯುಮಿರ್ಕುಮಿರ್ಪರೆ ಗಂಡರ್ ॥ ೬ ॥

ಮಾನಧನ ¹ನಿನ್ನ ಸುತನ್ನೈ— ।
ನ್ಯಾನುಜಶತಕಕ್ಕೆ¹ ಕೇತುವಲ್ಲದೆ ಗಂಗಾ— ॥
ಸೂನು ಮೊದಲಾದ ಪಲರ್ಗೆ* ।
ನೀನೊರ್ವನೆ ಕೇತುವಾದೆ ಕುರುಕುಲಕೇತೂ ॥ ೭ ॥

**ಕುಮು[ರಾ]ಂಕರಾಮನೃಪನೊಳ್** ।
ಸಮರಂ ನಿನಗರಿದು ತಕ್ಕುವೆನಗಂ ನಿನಗಂ ॥
ಸಮರಂ ನಿನ್ನಂ ನುಂಗ— ।
ಲ್ಕಮೋಘಶರಮಿರ್ದುಮಿವಱ ಸವಿಯುಂ ನೋಡಾ ॥ ೮ ॥

1 ನೆನಿಸಿ ನೀನರಿಸ್ಸೈನಿಕ [ಮನಿತರ್ಕೆ] 1 ಮುದ್ರಿತ ಪ್ರತಿಯ ಪಾಠವು.

ಎಂಬುದುಂ ಧರ್ಮನಂದನಂ ಧೃತರಾಷ್ಟ್ರನಂದನನ ಮುನ್ನಿಗೆಯ್ದ ಅಧರ್ಮಮಂ ಬಗೆಯದೆ ಕುಲಕ್ರಮಯುಕ್ತಮಪ್ಪ ನಿರ್ಮಲಕ್ಷತ್ರಧರ್ಮಮನೆ ಬಗೆದು

ಭರತಾನ್ವಯದೊಳಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮ- ।
ತ್ಸರ[1]ದಿಂದೆ[1] ಮೃನಕಾರಣಂ ಕದಡಿದರ್ ಸಾವೆಯ್ದಿದರ್ ಸಜ್ಜನೋ- ॥
ದರಮಾದತ್ತೆನಗಂ ಸ್ವಗೋತ್ರವಧೆಯುಪ್ಪಾ ಪಾತಕಂ ಕೌರವೇ- ।
ಶ್ವರ ನೀಂ ಸಂಧಿಗೊಡಂಬಡಿಂತು ಕೊಳನಂ ಪೊಕ್ಕಿರ್ಪುದೇಂ ತಕ್ಕುದೇ ॥ ೯ ॥

ಎಂಬುದುಮಾನುಡಿಗೆ ಸೈರಿಸಲಾಱದೆ ಬೂತೆಸ್ನ ಸರಂಗೇಳ್ದಿಲ್ಲದೆ ಪೊಱಮಡುವನಲ್ಲನೆಂಗಾಸೆ[2]ಸಾಲ್ವೆ[2]ನೆಂದು ಭೀಮಸೇನನುದ್ದಾಮಕೋಪಾಟೋಪ[3]ವಿರಚಿತ[3]ಬದ್ಧಭ್ರುಕುಟಿಯಾಗಿ—

ಒಳವಡ್ಡಿಗ್ರಹದೊಳ್ ನೀ- ।
ನೊಳಗಿರ್ದಯ್ ಮುನ್ನೆ ನಿನ್ನ ಕುಲಮೆಲ್ಲಮನಾಂ ॥
ಮುಳಿದಿಱಿದುಂ ಪಿಂದನೆ ಬಱಿ ।
ಕೊಳದೊಳಗುಱಿದಿರ್ದ ಮರುಳೆ ಬರ್ದುಕಲ್ ಬಗೆವಾ ॥ ೧೦ ॥

ಭವದನುಜನರುಣಜಲಮಂ ।
ಸವಿನೋಡಿದೆ[4][ನಾನೆ][4] ನಿನ್ನ ಬಲಜಲನಿಧಿಯಂ ॥
ಸವಿನೋಡಿದೆನೀ ಕೊಳನಂ ।
ತವೆ ಪೀರ್ದು ಬೞಿಕ್ಕೆ ನಿನ್ನ ನವಿಯಂ ನೋಡಿಪ್ಪೆಂ ॥ ೧೧ ॥

1 ಮಿಲ್ಲಿ 1 ಮದ್ರಾಸು ಪ್ರತಿಯ ಪಾಠವು.
2 ಬಲ್ಲಿ 2 ,, ,,
3 ಚಿತ್ತದಿಂ 3—ಮು. ಪು. ಪಾ.
4 ನಿಂತು 4—ಮು. ಪು. ಪಾ.

ಸರಮುಂ ಕೇಳಲ್ಕಿನ್ನು- ।
ಗ್ರರೂಪಮುಂ ಸಿಂದು ನೋಡಲಣ್ಮದೆ ಸಮರಾ ॥
ಕರಮುಂ ಬಿಸುಟ್ಟು ಕಮಲಾ- ।
ಕರಮುಂ ಪೊಕ್ಕೆಲವೊ ಮರುಳೆ *ಬರ್ದುಂಕಲ್ ಬಗೆವಾ ॥ ೧೨ ॥

ಜಳದೊಳ್ ಮೀನಿರ್ಪವೊಲ್ ನೀಂ ಕೊಳದೊಳೆ ಮುಳುಗಿರ್ದಕ್ಕಟಾ ಕೋಡ ಸೇಡಿಂ- ।
ಗೊಳಗಾದಯ್ ನಿನ್ನ ದುರ್ಯೋಧನ*ಪೆಸರ್ಗಿದು ಲಜ್ಜಾಕರಂ ತೋಱಿದಯ್ ನಿ- ॥
ಸ್ನಳವಂ ಚೀ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕಯ್ದುಗೊಳ್ ಕೌರವೇಂದ್ರಾ- ।
ಚಳವಜ್ರಂ ಬಂದನೀಗಳ್ ಕುರುಕುಲಮಥನೋದ್ಭೀಕರಂ ಭೀಮಸೇನಂ ॥ ೧೩ ॥

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರ[1]ಮೇನಾಯ್ತೊ[1] ಕೃಷ್ಣಾಂ- ।
ಬರಕೇಶಾ[2]ಕೃಷ್ಟಿಯಂ[2] ಮಾಡಿಸಿದ ಮದಮ[3]ದೇನಾಯ್ತೊ[3] ಕೌಂತೇಯರಂ ಮು- ॥
ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರಿಪಿದ ಸೊರ್ಕುಗಳೇನಾದುದೆಂದಾ ।
ಕುರುವಂಶಾಧೀಶನಂ ಮೂದಲಿಸಿದನ[4]ದಟಂ[4] ಭೀಮನುದ್ದಾಮಭೀಮಂ ॥ ೧೪ ॥

ಅಂತು ಮುಟ್ಟೆ ಮೂದಲಿಸಿ ನುಡಿದುಮೆಂತುಂ ಪೊಱಮಡಿಸಲಾಱದೆ-

ಎನಿತುಂ ಪೊಕ್ಕಿರ್ದಪಯ್ ನೀಂ ಪೊಱಮಡು ಕೊಳದಿಂ ದ್ರೌಪದೀದ್ರೋಹ ದುಶ್ಶಾ- ।
ಸನದುಷ್ಟಜ್ಯೇಷ್ಠ ಭೀಷ್ಮಪ್ರಮುಖನಿಖಿಲಬಂಧುಕ್ಷಯೋತ್ಪನ್ನದುಃಖ- ॥

---

1 ಮೆಲ್ಲಿತ್ತೊ 1-ಮು. ಪು. ಪಾ.

2 ಕರ್ಷಮುಂ 2-ಮು. ಪ್ರ. ಪಾ.

3 ದೆಲ್ಲಿತ್ತೊ 3-ಮು. ಪು. ಪಾ.

4 ಭಯಂ 4-ಮು. ಪ್ರ. ಪಾ.

ಧ್ವನಿನಾರಿಚ್ಛಿನ್ನಧೈರ್ಯದ್ರವಃ ಯಮಸುತ [1]ನಿಷ್ಕಾರಣ[1]ದ್ವೇಷಿ ಭೀಮ ।
ಧ್ವನಿಯಂ ಕೇಳ್ದಿನ್ನುಮಿರ್ದಪಯ್ ಕುರುಕುಲನಿಲಯೋತ್ಪಾತಸೋತ್ಪಾತಕೇತೂ ॥ ೧೫ ॥

ಎಂದು ಮತ್ತಮಿರದೆ—

ಒಡೆಯಲಜಾಂಡಂ ಕುಲಗಿರಿ ।
ಕೆಡೆಯಲ್ [2]ನಡುಗಲ್ಕೆ[2] ಧಾತ್ರಿ ದಿವಿಜರ್ [3]ಸೆಡೆಯಃ[3]– ॥
ಲ್ಕೊಡರಿಸುವಿ[4][ನಂ][4] ಜಟಾಸುರ ।
ಹಿಡಿಂಬಬಕವೈರಿ ಸಿಂಹನಾದಂಗೆಯ್ದಂ ॥ ೧೬ ॥

ಆ ಪ್ರಸ್ತಾವದೊಳ್—

ಅನಿಲತನೂಜನ ಸಿಂಹ ।
ಧ್ವನಿಯಂ ಕೇಳ್ದಳ್ಕಿ ತತ್ಸರೋವರ[5]ದೆರ್ದೆ*[5] ಪ– ॥
ಳ್ವನೆ ಪಾಱುವಂತೆ ಪಾಱಿದು– ।
ವನಾಕುಳಂ ಕೊಳದೊಳಿರ್ದ ತದ್ವಿಹಗಕುಳಂ ॥ ೧೭ ॥

ಅರಿ[6]ಸೀದುವು[6] ತಾವರೆ ಖಗ– ।
ಮುರಿಬೆಂದುವು ಭೀಮಕೋಪಶಿಖಿ ಮುಟ್ಟಿ ಸರೋ– ॥
ವರದ ಮಱಲ್ ಪುರಿಗಡಲಿಗೆ ।
ಪುರಿದ ಮಱಲ್ ಕಾಯ್ದು ತೆಱದೆ ಕಾಯ್ದತ್ತಿತ್ತಂ ॥ ೧೮ ॥

1 ಭೀಮಾರ್ಜುನ 1–ಮ. ಪ್ರ. ಪಾ.
2 ಪಿಟಿಯಲ್ಕೆ 2–ಮು. ಪು. ಪಾ.
3 ನಡುಗ 3–ಮು. ಪು. ಪಾ.
4 ನೆಗ 4–ಮು. ಪು. ಪಾ.
5 ದಸು 5–ಮ. ಪ್ರ. ಪಾ.
6 ಬೆಂದುವು 6–ಮು. ಪು. ಪಾ.

ಬಂದಂ ಬಕಾಂತಕಂ ಪೋ ।
ಕೊಂದಂ ಬಕನೆಸ*ರ್ಗೆ ಮುನಿದು ನಮ್ಮುಮನಿನ್ನಂ ॥
ಬಂದದೊಳೆ ಪಾಱಿಪೋದುವು ।
ನಿಂದಿರದುರವಣಿಸಿ ಬಕನಿಕಾಯುಕಮುದಱೊಳ್ ॥ ೧೯ ॥

ಕುಪಿತಮರುತ್ಸುತರವಕ- ।
ಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾ- ॥
ವಿಪೊಡೆ ಜನಕ್ಕೆ ಕೊಳಂ ಕಿ- ।
ಱಿತ್ತು ಪಾಱುವಂತಾಯ್ತು ಕಮಲಜಾಂಡಂಬರೆಗಂ ॥ ೨೦ ॥

ಅಳುದು*ರ್ಕೊಳೆ ಭೀಮಕೋಪಾ- ।
ನಳನೆಸಗ*ರ್ಯ್ದಿಟ್ಟ ತೆಱದೆ ಮುಱುಗಿದುದಾಗಳ್ ॥
ಕೊಳನ ಜಲಮೆಯ್ದೆ ಕಾಯ್ದಿಸ- ।
ರೊಳೆ ಕೂೞ್ ಕುದಿವಂತೆ ಕುದಿದುವಂದಾ ಮೀನ್ಗಳ್ ॥ ೨೧ ॥

ಅಂತು ಜಲಚರಜೀವರಾಶಿಗಳೆಲ್ಲಮನುಂಗೊಳೆ ಗೋಳುಂಡೆಗೊಳೆ ಕೊೞ್ಗುದಿಗೊಳೆ ಮಹೋತ್ತುಂಗಸಿಂಹಕೇತನಂ ಸಿಂಹನಾದಂಗೆಯ್ಯೆ—

ಆ ರವಮುಂ ನಿರ್ಜಿತಕಂ- ।
ಠೀರವರವಮುಂ ನಿರಸ್ತಘನರವಮುಂ ಕೋ- ॥
ಪಾರುಣನೇತ್ರಂ ಕೇಳ್ದಾ ।
ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥ ೨೨ ॥

ಅಂತು ಬೆಮರ್ತುಮ್ಮಳಿಸಿ ಸೈರಿಸಲಾಱದೆ ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು—

ಸಲಿಲಸ್ತಂಭನವಿದ್ಯಾ ।
ಬಲಮಂ[1]ನಪೇಕ್ಷಿ[1]ಸಿದನೆನ್ನದುರಗಪತಾಕಂ ॥

1 ನುಪೇ 1—ಮು. ಪ್ರ. ಪಾ.

ಬಲಹಾನಿಯಾಗೆ ಕೊಳದೊಳ್ ।
ಮುಳುಗಿರ್ದಪನೆಂದು ನಗರಿ ಕೂಂದಪದೆನ್ನಂ ॥ ೨೩ ॥

ಕಲ್ಯಂ ಸತ್ರಿಂಬಟಿಯುಮ ।
ಪಲ್ಯಂ ಕೊಳದೊಳಗೆ ಪೊಕ್ಕು ಮುಳ್ಗಿದಯ್ ಚಿಃ ॥
ಬಲ್ಯನೆನೆ ಬಾರ್ತೆಗೆಟ್ಟುದ ।
ಮೂಲ್ಯಯುತೋರತ್ನಮೆಂಬುದಂ ಮಾ[1]ಡು[1]ವೆನೆ ॥ ೨೪ ॥

ತೃಣವಲ್ಲಘುಜೀವಿತರ ।
ಕ್ಷಣಾರ್ಘದಿಂ ಕುಲದ ಚಲದ ಚಾಗಮುನಾಂತುಂ ॥
ಗುಣಹಾನಿಯಾಗಿ ಪುರುಷರ ।
ಗಣನೆಗೆವಂದೆನ್ನಾನೆ ಲಘುವಮಾದುವೆನೆ ॥ ೨೫ ॥

ಮುನಿವಂ ಮೂದಲಿಸಿಯುಮಿ– ।
ನ್ನೆನಿತುಂ ಪೊಕ್ಕಿರ್ಪನೆಂದು ಚಿತ್ತಕ್ಷೋಭಂ ॥
ತನಗಾಗೆ ಜಲಚರಕ್ಷೋ– ।
ಭನಿನಾದಂ ಪೊಕ್ಕು ಪೊಣ್ಮೆ ವಿಭುವಕ್ಷೋಭಂ ॥ ೨೬ ॥

ಆಗಳಾ ಜಲಸ್ತಂಭಮಂತ್ರಮೆಲ್ಲಮವಿನೀತನಪ್ಪ ರಾಜಪುತ್ರನೊಳಾಲೋಚಿಸಿದ ಮಂತ್ರದಂತೆ ಪರಿಣಾಮರಮಣೀಯಮಾಗದೆ ಕಿಡೆಯುಮ ಹಂಕಾರಂಗಿಡದೆ—

ನಿಜಮುಕುಟಸ್ಫುರನ್ಮಣಿಗಣಚ್ಛವಿಯಿಂ ಸುರಚಾಪಲೀಲೆ ಪಂ– ।
ಕಜವನದೊಳ್ ಮನಂಗೊಳಿಸೆ ತನ್ನಯ ಮೇಗೊಗೆದಿರ್ದ ನೀಲನೀ– ॥
ರಜವನದಿಂ ಕಜಂಗಿ ಕಮಲಾಕರದಿಂ ಪೊಱಮಟ್ಟನಾಗಳಾ ।
ಭುಜಯುಗತೋರಣಾಚಿತಗದಾಪರಿಘಂ ಫಣಿರಾಜಕೇತನಂ ॥ ೨೭ ॥

1 ಸು 1 ಮು. ಪು. ಪಾ.

ಉನ್ಮಜ್ಜತ್ಕುರುರಾಜಕ- ।
ನನ್ಮಣಿಮಯಮಕುಟಮಣಿಗಣಾರುಣವಿಸ್ಫೀ- ॥
ಪೋನ್ಮಣಿಕಿರಣದ್ಯುತಿಜಲ ।
ಜನ್ಮಂ ಬೆಳಗೆಸಿಸನಾಳ್ದುದಾ ಕಮಲವನಂ ॥ ೨೮ ॥

ರಭಸೋದ್ಗತಮಾದ ತರಂ- ।
ಗಭಂಗಮೂರುಗಳೊಳುತ್ತಮಾಂಗದೊಳೆತ್ತಂ ॥
ಪ್ರಭವಿಸಿದುವು ಕೌರವನೂ- ।
ರುಭಂಗಮಂ ಮಕುಟಭಂಗಮಂ ಸೂಚಿಸವೊಲ್ ॥ ೨೯ ॥

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋಮಧ್ಯದಿಂ ಸಾ।
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟಿಲ್ಲಿದಂ ಭೀಮನೆಂದಾ ॥
ಕ್ಷದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಿಲಾಲೋಲಕೀಲಾಕ್ಷಿವೊಲ್ ದ- ।
ಳ್ಪಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ
॥ ೩೦ ॥

ಅಂತಿರ್ದ ದಂದಶೂಕಪತಾಕನ ಸೆರಗಿಲ್ಲದ ಮೆಯ್ಗಲಿತನಕ್ಕೆ ಮೆಚ್ಚಿ ತಲೆಯಂ ತೂಗಿ ನಿಜಭುಜಪ್ರತಾಪನಿರ್ಜಿತನಿಖಿಲಭೀಮಸೇನಂ ಭೀಮಸೇನಂ ಕೌರವನಿದಿರ್ಗೆವಂದು—

ನಿನ್ನನುಜನರುಣಜಲಮಂ ।
ಮುನ್ನಂ ತವೆ ಪೀ[1]ರ್ದೊಡಂಜಿ ನೀಂ ಪುಗೆ ಕೊಳನಂ[1] ॥
ಬೆನ್ನನೆ ಬಂದಾತಂ ಶೌ- ।
ರ್ಯೋನ್ನತನೀಯಿರ್ದನಲ್ತೆ [2]**ಸಾಹಸಭೀಮಂ**[2] ॥ ೩೧ ॥

ಎಂದು ನೆಱೆನನುಂಟುಮಾಡಿ ಮೂದಲಿಸಿ ನುಡಿಯೆ ದುರ್ಯೋಧನನತಿಕ್ರೋಧಾನಲನಾಗಿ—

1 ರ್ದೊ ನಿನ್ನನಜಿಸುತ್ತೀಗಳ್ 1—ಮ. ಪ್ರ. ಪಾ.

2 ಕೌರವಮಲ್ಲಂ2 – ಮು. ಪ್ರ. ಪಾ.

ಯಮರಾಜಪ್ರಿಯಸೂನುಗಂ ನಿನಗಮಾ ಗಾಂಡೀವಧನ್ವಂಗಮಾ ।
ಯಮಳರ್ಗಂ ಪ್ರಿಯೆಯಪ್ಪ ಕೃಷ್ಣೆಯ ಕಚಪ್ರಾರಂಭಮಂ ಬಾಯುವಿ- ॥
ಕ್ರಮದಿಂ ದುಶ್ಶಾಸನನೆನ್ನ ಮುಂದೆ ತೆಗೆವಂದೆಲ್ಲಿರ್ದುದೋ ಗಂಡಗ- ।
ರ್ವಮುಮಂದೆಲ್ಲಿಗೆ ಪೋಯ್ತು ಷಂಡ ನಿನಗಿಂದೀ ಗಂಡವಾರ್ ಮಾಡಿದರ್ ॥ ೨೧ ॥

ಅನಿಲಾತ್ಮಜ ನಿಮ್ಮಯ್ವರ ।
ವನಿತೆಯನೊರ್ವಳನೆ ತಂದನಲ್ಲಂ ದುಶ್ಶಾ- ॥
ಸನನೆಬಿಸಿದು ತಂದನಖಿಳಾ- ।
ವನಿಯುಮನಂದೆನಗೆ ಕೀರ್ತಿಯಂ ಲಕ್ಷ್ಮಿಯುಮಂ ॥ ೨೨ ॥

ಅಸುರಂ ವಸುಧಾತಳಮಂ ।
ರಸಾತಳಕ್ಕುಯ್ಯೆ ಹರಿ ತರಲ್ ಪೊಕ್ಕವೋಲೀ ॥
ವಸುಮತಿಯನೆತ್ತಿ ನಿನ್ನಯ ।
ಪೆಸೆಯಿಂ ತರೆ ಪೊಕ್ಕೆನಂಜಿ ಪೊಕ್ಕೆನೆ ಕೊಳನಂ ॥ ೨೩ ॥

ನಾಟ್ಕಿಡಿಗಳೆದುಱಿ ಬೇರಂ ।
ಬಿಟ್ಕಿಯುಮಂ [1]ತಿಂದು ವನದೊಳಡಗಿರೆ[1] ನೀಮುಂ ॥
ನೀಟ್ಕಿರಿಸಿ ನಿಂದುಮಿಗಳ್ ॥
ಪೇಟ್ಕಿಮ್ಮಯ್ಯಸುವರೆ ಬಿರುದುಮಂ ಬೀರಮುಮಂ ॥ ೨೫ ॥

†ಸಕಲಜನನಿಂದ್ಯಲೋಕಕೋ- ।
ತ್ಸ್ನಕನಯ್ ನೀಂ ಸಕಲಭುವನದೂಷಕನಯ್ ಮ- ॥
ತ್ಸ್ಯಕನಲ್ಲಿ ವಲಲನಯ್ ಸೂ- ।
[ದಕರ್ಮಿ] ನಿನಗಿಂತು ಗಂಡಗರ್ವಮುಮಾಯ್ತೇ† ॥ ೨೬ ॥

ಪುಟ್ಟಂ ಸಟ್ಟುಗಮಂ ಕೊಂ- ।
ಡಟ್ಟಾಜಿಸಿ ಬೋನ [2]ಮೆತ್ತಿ[2]ಬಂದೆಯೊ ಗಡಗೊಂ- ॥

1 ತಿಂದರಣ್ಯದೊಳಗಿರೆ1—ಮು. ಪ್ರ ಪಾ.

2 ಮಿಟ್ಟು2—ಮು. ಪು. ಪಾ.

† ೨೬ನೆಯ ಪದ್ಯವು ಮದ್ರಾಸು ಪ್ರತಿಯಲ್ಲಿ ಮಾತ್ರ ಇದೆ.

ಡೊಟ್ಟೈ¹ಸಿ ಕಾದುವಂತುಟು¹ ।
ತೊಟ್ಟನೆಕೊಳೆ ನಿನಗೆ ಗಂಡಗರ್ವಮುಮಾಯ್ತೇ ॥ ೩೭ ॥

ಎಸರನಿಡುವಕ್ಕಿಗರ್ಜುನ ।
ಬೆಸನಂ ಕಯ್ಗೆಯ್ವ ಕಂಚುಗಾರ್ಜುನ ಬೆಸನಂ ॥
ಬೆಸನಲ್ಲದೆ ಮತ್ಸ್ಯನ ಬಾ- ।
ಣಸಿಗಂಗಾರಿತ್ತರೆಲವೊ ನಿನಗೇ ಬೆಸನಂ ॥ ೩೮ ॥

ಎಂದು ಮುಟ್ಟೆ ಮೂದಲಿಸಿ ನುಡಿಯೆ ಭೀಮಸೇನಂ ಮುಗುಳ್ನಗೆ ನಕ್ಕು—

ಪಿರಿಯಣ್ಣನ ನನ್ನಿಯನಾ- ।
ದರದಿಂ ಕಾಯಲ್ಕೆ ಪೆಱಗೆ* ಬಾಣಸುಗೆಯ್ದೆಂ ॥
ಕುರುವಂಶಜ ಕೇಳ್ ನಿನ್ನೀ ।
ಶರೀರಮಾಂಸದೊಳೆ ಮರುಳ್ಗೆ* ಬಾಣಸುಗೆಯ್ವೆಂ ॥ ೩೯ ॥

ನೆನೆ ಚಿತ್ರಾಂಗದನಿಂದಮಂದು ನಿನಗಾದಾ²ಪತ್ತನಾ² ಬನ್ನಮಂ ।
ನೆನೆ ನೀಂ ಗೋಗ್ರಹಣ ಪ್ರಪಂಚದೊಳೆ ಮೆಯ್ವೆತ್ತಿರ್ದುದಂ ನಿನ್ನ ತ- ॥
ಮ್ಮನ ಕೆನ್ನೆತ್ತರನೀಂಟುವಲ್ಲಿ ಭಯದಿಂದಳ್ಕುತ್ತೆ ಬೆನ್ನಿತ್ತುದಂ ।
ನೆನೆ ಪಿಂತಿಕ್ಕಿದ ನಿನ್ನ ಮುನ್ನಿನ ಕವಲ್ಬನ್ನಂಗಳಂ ಕೌರವಾ ॥ ೪೦ ॥

ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತಗುಪ್ತಾನ್ನದಿಂ ।
ಕೃತಕದ್ಯೂತವಿನೋದದಿಂ ದ್ರುಪದಜಾಕೇಶಾಂಬರಾಕೃಷ್ಟಿಯಿಂ ॥
ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ ಕೋಟಿದಯ್ ।
ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತಂತ್ಯಕಾಲಂ ಗಡಾ ॥ ೪೧ ॥

ಎಂದುರಗಧ್ವಜನಂ ಮರ್ಮೋದ್ಘಾಟನಂಗೆಯ್ದು ಮೂದಲಿಸಿದ ನಿತಜನೊಳೆ ನಿಂದುರಗಧ್ವಜಂ ಮುನಿದನಿಬರ ಮೊಗಮುಂ ನೋಡಿ—

1 ಸುವಂತುಟಾದುದೆ1—ಮು. ಪು. ಪಾ.
2 ಬನ್ನಮಂ2—ಮು. ಪು. ಪಾ.

† ಇರಲೆಂತೋ ಮಾದ್ರಿಪುತ್ರರ್ ಬ[ಡವು]ಗಳವರೇಗೆಯ್ವರಿಂ ಧರ್ಮಪುತ್ರಂ ।
ಬಿರಸಿಂಗಳ್ ಬರ್ಕೆ ಭೀಮಂ ಹರಿಸುತನೊಡನೀ ಮಾಣದಿರ್ಕೆ ಬರ್ಕೆ
ನೇಣ ॥
ಯ್ವರು[ಮಿಂ] ಬರ್ಕೆ ಕೃತಾಂತಾತ್ಮಜಪವನಜಗಾಂಡೀವಧನ್ವರ್ಕಳ್
ವಮ ।
ವರೊಳೊರ್ವಂ ಕೃಷ್ಣ ಬರ್ಕೆಂ ದ್ರೋಣರಲ್ಲಿಬರುಂ ಬರ್ಕೆ ಪೋಗಾ ಬನ್ದ್ಯ
ಮಾನಂ ॥ ೪೨ ॥

ಎಂದುರಗಧ್ವಜಂ ಗರುಡಧ್ವಜನಂ ಸಂಬೋಧಿಸಿ ನುಡಿಯೆ—

ವನರುಹನಾಭಂ ದುರ್ಯೋಧ— ।
ಧನನೆಂದೊಡೆ [1]ಕೇಳ್ವು[1] ಭೀಮಸೇನನ ಜಡಿದಂ ॥
ವಿನಯಮನೆ ಮೆಱೆವ ದುರ್ಯೋಧ— ।
ಧನನಂ ನೀನೆನ್ನ ಮುಂದೆ ನುಡಿವುದೆ ಭೀಮಾ ॥ ೪೩ ॥

[2]ಎನೆ ಧರ್ಮನಂದನಂ ಧೃತರಾಷ್ಟ್ರನಂದನಂ ಮುನ್ನೆ ಗೆಯ್ದ ಅಧರ್ಮಮಂ ನೆನೆಯದೆ ನಿರ್ಮಲಕ್ಷತ್ರಧರ್ಮಮ[ನೆ] ನೆನೆದು[2]—

ಆಗದು ಸಮರಂ [3]ಶಮ[3]ಯುತ— ।
ನಾಗು ಮಹಾಭೋ[4]ಗಿಯಾಗು[4] ನಿನ್ನಾಳ್ವ ಮಹೀ ॥
ಭಾಗಮು[5]ಮಂ ಸಕಲ[5]ಮಹೀ ।
ಭಾಗಮುಮಂ ನೀನೆ ಕೊಂಡು ಸುಖಮಿರಲಾಗಾ ॥ ೪೪ ॥

---

1 ಮುಳಿದು1—ಮ. ಪ್ರ. ಪಾ.
2 ಎಂಬುದುಂ ಧರ್ಮನಂದನಂ ಧೃತರಾಷ್ಟ್ರನಂದನಂಗೆ ಬದ್ಧಾಂಜಲಿಯಾಗಿ 2— ಮದ್ರಾಸು ಪ್ರತಿಯ ಪಾಠಾಂತರವು.
3 ಗುಣ3—ಮು. ಪು. ಪಾ.
4 ಗಭಾಗಿ—4 ,, ,,
5 [ಮನೆ]ಮ್ಮ[ಯ]—ಮ. ಪ್ರ. ಪಾ.

† ಇಂತಿನೆಯ ಪದ್ಯವು ಮುದ್ರಿತ ಪುಸ್ತಕದಲ್ಲಿ (ಅರ್ಧಸಮವೃತ್ತಂ) ಎಂದು ಸ್ಪಷ್ಟ ವ್ಯತ್ಯಸ್ತವಾಗಿ ಕೊಡಲ್ಪಟ್ಟಿದೆ. ವೃತ್ತದ ಹೆಸರು ಮೈಸೂರು ಪ್ರತಿಯಲ್ಲಿ ಇಲ್ಲ. ಇಲ್ಲಿ ಕೊಟ್ಟಿರುವ ಪಾಠವು ಮುಖ್ಯವಾಗಿ ಮದ್ರಾಸು ಪ್ರತಿಯ ಪಾಠವನ್ನು ಆಧರಿಸಿದುದಾಗಿದೆ.

ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ ವಿದ್ವೇಷಮಂ ನಮ್ಮನ- ।
ಯ್ಯರಸಿನ್ನಾಳ್ವಿಸಕೆಯ್ಸಿಕೊಳ್ ನೆನೆಯದಿರ್ ಕೀಟ್ವಕ್ಕಿನೊಳ್ ತ್ರೊಟ್ಟುಕೊಂ-
ಡಿರದೆನ್ಮೊಂದುದನಿಂಬುಕೆಯ್ ಮನದೊಳೊಳ್ಪಿಂ ಶಾಂತಿವಿಶ್ರಾಂತಿಸೋ- ।
ದರನೆಂಬಂತುಪಶಾಂತಿಯಂ ಕುರುಕುಲಕ್ಷ್ಮಾಪಾಲಚೂಡಾಮಣೀ ॥ ೪೫ ॥

ಎನೆ ಹರಿಯೆಂದಂ ದುರ್ಯೋ- ।
ಧನ ಧರ್ಮತನೂಜನೊಳ್ಳಿತಂ ಪೇೞ್ವಪನಾ- ॥
ತನ ಪೇೞ್ವುದೆಸಗಿ ನೀನರ- ।
ಸನಾಗಿ ವಸುಮತಿಯನಾ [1]ಳ್ದು ಸುಖವಿ[ರಲಾಗಾ][1] ॥ ೪೬ ॥

ಎಂಬುದುಂ ಭೀಮಸೇನನಿಂತೆಂದಂ—

ನೀನಯ್ದುಬಾಡದೊಳ್ ಸಂ- ।
ಧಾನಂಮಾಡಲ್ಕೆ ಪೋದೊಡೊಲ್ಲ[2][ದ]ನಿ[2]ನ್ನೀ ॥
ಮಾನಧನನೆಯ್ದೆ ನಿಜತನು- ।
ಜಾನುಜರಿರ್ಕ್ಕಡೆ ಸಂಧಿಯಂ ಮಾಡುವನೇ ॥ ೪೭ ॥

ಎನೆ ದುರ್ಯೋಧನಂ ಭೀಮಸೇನನ ನುಡಿಯನೆ ಸಮರ್ಥಿಸಿ,—

ಇನತನಯನ [3]ನೇರ್ಪಿಂ[3]ಗ- ।
ರ್ಜನನಂ ಮುಂ ಕೊಲ್ವೆನೆನ್ನ ತಮ್ಮನ [4]ನೇರ್ಪಿಂ[4]- ॥
ಗನಿಲಜನಂ ಕೊಲ್ವೆಂ ಕಮ- ।
ಲನಾಭ [5]ನೇರ್ಪಿಂಗೆ[5] ನೇರ್ಪುರ್[6]ಗೊಳ್ಳ[6]ದೆ ಮಾಣೆಂ ॥ ೪೮ ॥

---

1 ಳ್ವುದಾವುದುದೋಷಂ 1—ಮು. ಪು. ಪಾ.

2 ದೆಮು 2—ಮು. ಪು. ಪಾ.

3 ನಣ್ಪಿಂಗೆ 3—ಮು. ಪ್ರ. ಪಾ.

4 ನಣ್ಪಿಂಗೆ4— ,, ,,

5 ನಣ್ಪಿಂಗೆ5— ,, ,,

6 ಗೊಳಿಸ6— ,, ,,

ತ್ರಾಂ ಗಡ ಮಧ್ಯಸ್ಥಂ ನುಡಿ- ।
ವಂ ಗಡ ಪ್ರದುವಾಱ್ಕಿಯೆಂಸಗಮವರ್ಗಂ ಸಂಧಾ ॥
ನಂ ಗಡ ಸಂಧಿಯ ಮಾತಂ ।
ಲಂಘಿಸಿದಂ ಮುನ್ನಮಿನೊಪಂ[ಬಟ್ಟಿಪೆನೇ][1] ॥ ೪೯ ॥

ಎಂದು ನುಡಿ[ದು] ಕಂಜನಾಭನಸಮಂಜಸಿಕೆಯೊಳ್ ತನ್ನಂ ತೆಗಟ್ಟಿ ನುಡಿದುದರ್ಕೇನ್ವೈಸಿ—

ಅಂದು ಜರಾಸಂಧ [ನಿನಿನಿ- ।
ತ್ತೊಂದು ಪರಾ]ಭವಮನೆಯ್ದು ಭೀಮನ ಮುಱಿಯಂ ॥
ಬಂದು ಪುಗೆ ಕೊಂದು [ಕುಡಲೊಡ- ।
ನಂದಿಂ ನೀಂ ದೇವನೆನಿಸಿ ದೊಡ್ಡಿದನಾದಯ್] ॥ ೫೦ ॥

ಅನುಪಮಫಲದೆ ಜನಾರ್ದನ- ।
ನೆನಲಕ್ಕಂ ಗುರುಜನಾರ್ದನಂ ಬಂಧುಜನಾ- ॥
ರ್ದನನೆಂದು ಪಾಪಫಲದಿಂ ।
ನಿನಗಾಯ್ತು ಪೆಸರ್ ನಿರರ್ಥಕಂ ವಾಕ್ಯಾರ್ಥಂ ॥ ೫೧ ॥

ಪುರುಷಾಕಾರಮದಿಲ್ಲಯ್ ।
ಹರಿ ನಿನ್ನೊಳ್ ಪುರುಷಕಾರಮಂ ಕಾಣೆಂ ಕಾ- ॥
ಪುರುಷರ ಗಣನೆಗೆವಂದುಂ ।
ನರಂಗೆ ತೇರೆಸಗಿ ಮತ್ತೆ ಪುರುಷೋತ್ತಮನೇ ॥ ೫೨ ॥

1 ನಾಂ ಗಡ ಮಧ್ಯಸ್ಥಂ ನುಡಿ ।
ವಂ ಗಡ ಪ್ರದುವಾಳಲಿಮಗೆ ಪಾಂಡವಸಂಧಾ- ।
ನಂ ಗಡ ಮುನ್ನಮೆ ಸಂ[ಧಿಯು- ।
ಮಂ ಗಡ]ಲಂಘಿಸಿದೆನೆಂದನಹಿಪಸುತಾಕಂ ॥ 1 -ಮುದ್ರಾಸು ಪ್ರತಿಯ ಪಾಠಾಂತರವು

ಬಿಬ್ಬಿರುಮನಿಜೀವೆ ನೀನುಂ ।
ಪೆಟ್ಟರುಮಂ ಕೊಲ್ವ ಕಲಹದೊಳ್ ಸೋಟಂಗಂ ।
ದೆಬ್ಬಾಡಿಯೆ ಮುನಿದಿಸುವಯ್ ।
ಬಿಟ್ಟನೆಯ ಕೋದನೆರಡುಮಂ ಕಟ್ಟುಜುವಯ್ ॥ ೫೩ ॥

ವನವಾಸಮಲಿನನಂ ಯಮ ।
ತನಯನನುಜ್ಜ್ವಳಿಸಿ ಗೋತ್ರಧವಳನೆನಿಸ್ಸಂ ।
ಘನಮಲಿನಂಮಾಡಿದೆ ಕೃ- ।
ಷ್ಣ ನಿನ್ನವೊಲ್ ಶ್ವೇತಕೃಷ್ಣಕಾರಕರೊಳರೇ ॥ ೫೪ ॥

ನೀನುದಧಿಯೊಳೊರ್ವಳ್ ನೀ- ।
ರ್ವಾನಸೆಯಂ ಪಡೆದ ಗರ್ವದಿಂದಾನುಂ ಲ- ॥
ಕ್ಷ್ಮೀನಿಳಯನೆನಿಂದಿರ್ದಪ- ।
ಯಾನಜೀಯನೆ ನಿನ್ನ ಸಿರಿಯ ಮಹಿಮೆಯ ಪ್ರರುಳಂ ॥ ೫೫ ॥

ಯದುಕುಲಜಲನಿಧಿಯೊಳ್ ಪು- ।
ಟ್ಟಿ[1][ದರ][1]ಮರ್ದಂ* ನಂಜುವೊಡನೆ ಪುಟ್ಟುವವೋಲಂ- ।
ಕದ ಹಲಿಯುಂ ನೀನುಂ ಬಲ ।
ನಡರ್ಕೆ ಗುಣೆಯಾದ[2] ನತ್ತ[2] ನೀಂ ನಿಗುರ್ಣಗೆಯಯ್ ॥ ೫೬ ॥

ಎಂಬನ್ನೆಗಮಾ ಪ್ರಸ್ತಾವದೊಳ್—

ಹಲಮುಸಲಪಾಣಿ ಮಧುಪಾ- ।
ಟಲನೇತ್ರಂ ನೀಲವಸನ[1]ನಾ ಧವಳಾಂಗಂ[1] ।
ಬಲನೇಕಕುಂಡಲಂ ಕುರು- ।
ಕುಲನಂ ಕೂಡಲ್ಕೆ ತಾಳಲಕ್ಷ್ಮಂ ಬಂದಂ ॥ ೫೭ ॥

---

1 ದೆಯ1—ಮು. ಪು. ಪಾ.
2 ಮತ್ತೆ 2— ,, ,,
3 ಧವಳಾಂಗಯುತಂ3—ಮು. ಪ್ರ ಪಾ.

ಅಂತು ಸುಯೋಧನಂಗೆ ಸೈಪು ಬರ್ಪಂತೆಯುಂ ಸಕಲಜಗತ್ಪವಿತ್ರ ತೀರ್ಥಸಲಿಲಸಂಪಾದಿತನಿಖಿಲಾಘಮರ್ಷಣಂ ಸಂಕರ್ಷಣಂ ಜಂಗಮ ಹಿಮಾಚಲಮೆ ಬರ್ಪಂತೆಯುಂ ಬಂದು ತಮ್ಮನಿಬರೊಂದಾಗಿ ಗೊಂದಣಿ ಸಿರ್ದ ಪಾಂಡುನಂದನರುಮಂ ಏಕಾಕಿಗನಾಗಿ ಸಾವಿಯ ದೇಸಿಗನಾಗಿ ನಿಂದ ಕುರುಕುಲಸ್ವಾಮಿಯುಮಂ ಕಂಡು ದೇವಕೀನಂದನನ ವದನಾರ ವಿಂದಮಂ ನೋಡಿ ವಿಸ್ಮಯಾಕ್ರಾಂತಚಿತ್ತನಾಗಿ ಮನದೊಳ್ ಕಟ್ಟುವಡೆದು ತನಗೆಣಗಿದ ಫಣಿರಾಜಕೇತನನಂ ಮನದೆಣಕದಿಂ ಪರಸಿ ಗರುಡಕೇತನನಂ ಪಾಂಡವರಯ್ವರುಮಂ ಪರಸಲೊಲ್ಲದೆ ಮುಳಿದು ತಮ್ಮನನವರಯ್ವರು ಮಂ ನೋಡಿ—

ಜಲರುಹನಾಭನ ನಾಭಿಯೊ- ।<br>
ಳೊಳಗುಟೀದರ್ ನಿನ್ನ ಮಂತ್ರಬಲದಿಂ ಬ್ರಹ್ಮರ್ ॥<br>
ಪ್ರಳಯ[ದೊಳಿ]ನಿತುಂ ಕೌರವ ।<br>
ಕುಲಚೂಡಾಮಣಿಯೊಳೇನನಾಲೋಚಿಸಿದಯ್ ॥ ೫೭ ॥

ಎಂದು ನುಡಿದ ಹಲಾಯುಧನ ನುಡಿಗೆ ಚಕ್ರಾಯುಧನಿಂತೆಂದಂ—

ಎನಗಭಿವಂದಿತಾರ್ಥರವಧಾರಿಸು ಚಿತ್ತದೊಳಗ್ರಜಾತ ನೀಂ ।<br>
ಮುನಿಯದೆ ಪಾಂಡುನಂದನರ್ಗೆ* ಬಾಡಮನಯ್ದನೆ ಬೇಡೆ ಪೋಗೆ ದ್ರೋ*-॥<br>
ಣನ ಧೃತರಾಷ್ಟ್ರಸಿಂಧುಸುತರಿಂದುದ[1]ಸೆನ್ನದೆ[1] ನೀವಿದಂ ಸುಯೋ- ।<br>
ಧನ[2]ನನೆ[2] ಕೇಳಿ ನಂಬುವುದೆರಬ್ಬಿಡಿಯಂ ಫಣಿರಾಜಕೇತನಂ ॥ ೫೮ ॥

ಎನೆ ದುರ್ಯೋಧನನೆಂದನೇಕೆ ಮುನಿವಿರ್ ನಿರ್ದೋಷಿಗಳ್ ಪಾಂಡುನಂ-।<br>
ದನರಾನೊಲ್ಲೆನೆ ಮುನ್ನ[3]ಮೆಂದುಮ[3]ವರೊಳ್ ಸಂಧಾನಮಂ ಪೇಟ್ವೆನೆಂ-॥

1 ಮಾಡದೆ1—ಮು. ಪು. ಪಾ.<br>
2 ನೊಳೆ2— ,, ,,<br>
3 ಮೆಂತುಮ3— ,, ,,

ದೆನೆ ಸತ್ತರ್ ತನುಜಾನುಜರ್ ಪಲವರುಂ ತದ್ದುಃಖಮಂ [1]ಕಂಡೆನಿ ।
ನ್ನಿನಿತುಂ ಸೈರಿಪೆನೆಂತುಮಿರ್ಕೆ[1] [2]ಪಗೆವರ್[2] ಸನ್ನದ್ಧನಾಗಿರ್ದಪೆಂ ।೫೯।

ಇವರೆನ್ನನುವರಮಂ ನೋ- ।
ಡುವುದಲ್ಲದೆ ಬೇಱೆ ಪೆಱವು ಮಾತಿಂಗೆಡೆಯಿ- ।
ಲ್ಲವಧಾರಿಪುದೆಂದೊಡೆ ಕೌ- ।
ರವೇಂದ್ರನಂ [3]ಮುಸಲ[3]ಪಾಣಿ ಮನದೊಳ್ ಪೊಗೞ್ದಂ* ।೬೦।

ಅಂತು ಪೊಗೞ್ದು ರಾಜರಾಜನ ನಿರ್ವ್ಯಾಜಶೌರ್ಯಕ್ಕೆ ಸಂಕರ್ಷಣ ನಾಶ್ಚರ್ಯಂಬಟ್ಟು ಪೆಱತೇನುಮನೆನಲಱಿಯದೆ ಧರ್ಮನಂದನಾದಿಗಳ ಮೊಗಮಂ ನೋಡಿ— ನಿಮ್ಮಯ್ವರೊಳಾರಾಗಿಯುಮೀತನೊಳ್ಪೊರ್ದನೆ ಕಾದುವುದು ಕಾದಿ ಗೆಲ್ದಂಬೞಿಯಂ ದುರ್ಯೋಧನಂ ನೆಲನನಾಳ್ಗೆ ಅತಂ ಗುೞಿದ ನಾಲ್ವರ್ ಬೆಸಕೆಯ್ದು ಜಾೞ್ವರೆಂದು ನುಡಿಯೆ ಭೀಮಸೇನನಿ ರ್ಗೆವಂದು—

ಅಱಿಮಗನಿರ್ಕೆರ್ಜುನನಿ- ।
ರ್ಕಱಿಕೆಯು ಮಾದ್ರೀಸುತರ್ಕಳಿರ್ಕೆಱಿವಗೆಯುಂ ॥
ಪಱಿಪಡಿಸಲ್ಕೆ ಹಲಾಯುಧ ।
ನೆಱೆದಿರ್ದಪೆನೆನಗೆ ತೋಱು ಬಿಡು ಕೌರವನಂ ॥ ೬೧ ॥

ಅಂತು ಮರುನ್ನಂದನಂ ರೋಹಿಣೀನಂದನಂಗೆ ನುಡಿದು ದ್ವಂದ್ವ ಯುದ್ಧಕ್ಕೆ ಧರ್ಮನಂದನಾದಿಗಳ ಮೊಗಮಂ ನೋಡಿ—

ಪಗೆಗೆ ಮೊದಲಿಗನೆನಾನಿಡು- ।
ವಗೆ ಕೌರವನಂತದಕ್ಕೆ ನೀಮೆಲ್ಲಂ ದಾ- ॥

---

1 ಸೈರಿಸಲ್ಕೆನಸುಂ ಬಂದಪುದೆಂದೊಡಿರ್ಕೆ1–ಮು. ಪು. ಪಾ.
2 ಪಗೆವಂ2–ಮು. ಪ್ರ. ಪಾ.
3 ಸೀರ 3– ,, ,,

ಯಿಂಗತನಮನಿಲ್ಲಿ ತೋಱಿಲ್ ।
ತಗದೀತಂ ಮುನ್ನಮೆನಗೆ ದೊರೆಯಾಗಿರ್ದಂ ॥ ೬೨ ॥

ಎಂಬುದುಂ ಕುರುಕುಲಾಚಲಪ್ರಳಯಕಾಲವಜ್ರಧರನೆನಿಸಿದ ನಾರಾತಿಗಂ ಪಾಂಚಾಲೀಕುಂಚಿತಕೇಶಪಾಶಾಕೃಷ್ಟಿಪಾತಕಪ್ರಧಾನನಿಹಿತಹಿತನೆನಿಸಿದ ಫಣಿರಾಜಕೇತನಂಗಂ ಧರ್ಮನಂದನಾದಿಗಳಿರ್ದು ಧರ್ಮಯುದ್ಧಮನೆ ಸಮಕಟ್ಟಿದಾಗಳ್ —

ಕ್ರಮಗಣನೆಗೆ ತಾನುಂ ಮು- ।
ನ್ನಮಪಾಂಡವನಾದನಹಿತನೊಳ್ ತೊಟ್ಟ ಮಹಾ- ॥
ಸಮರಕ್ಕೆ ನರಾಗ್ರಜನ- ।
ಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ ॥ ೬೩ ॥

ವನರುಹನಾಭನ ಬಲದೇ- ।
ವನ ಸಾನ್ನಿಯೊಳಿರ್ದು ಕೌರವೇಶ್ವರನಾ ಭೀ- ॥
ಮನ ಕಯ್ಯೊಯ್ಯೊಡೆ ತದ್ದೇ- ।
ವನಿಕಾಯಂ *ಪೊಗಟ್ಟಿರದಟುಮಂ ಕುರುಪತಿಯಾ ॥ ೬೪ ॥

ಅಂತು ಧರ್ಮಯುದ್ಧಕ್ಕೆ ಕಯ್ಯೊಯ್ವಾಗಳ್ —

ಎನಿತು ಕುರುಕ್ಷೇತ್ರದೊಳಿದೆ- ।
ಯನಿತುಂ ಬಱಿದಿಲ್ಲದಂತು ಶವಶತದಿಂ ತೆ- ॥
ಕ್ಕನೆ ತೀವೆ ರಣೋತ್ಸವದಿಂ- ।
ದನಿಲಸುತಂ ತಾನೆ ಸಮಱಿದಂ ಕೊಳ್ಗುಳಮಂ ॥ ೬೫ ॥

ರಥಮಿಲ್ಲದೆಯುಂ ಜಂಘಾ- ।
ರಥದಿಂದೆ ಸಹಾಯರಿಲ್ಲದಿರ್ದೊಡಮುರ್ವೀ ॥
ಪ್ರಥಿತಭುಜಬಲಸಹಾಯದೆ ।
ಪೃಥಿವೀಪತಿ ತಾನೆ ಕಾದಲುದ್ಯತನಾದಂ ॥ ೬೬ ॥

ಸುರರಾಜಂಬೆರಸಷ್ಟದಿಕ್ಪತಿಗಳುಂ ಮೂವತ್ತುಮೂದೇವರುಂ ।
ಪರಮಬ್ರಹ್ಮನುಮಷ್ಟನಾಗಕುಲರುಂ ಚಂದ್ರಾರ್ಕರುಂ ಪಾರ್ವತೀ- ॥
ಶ್ವರನುಂ ಷಣ್ಮುಖನುಂ ಗಜೇಂದ್ರಮುಖನುಂ ವಿದ್ಯಾಧರಾಧೀಶರುಂ ।
ನೆರೆದಿರ್ದರ್ ನಭದೊಳ್ ಕುತೂಹಲಯುತರ್ ನೋಡಲ್ **ಗದಾಯು ದ್ಧಮಂ** ॥ ೬೭ ॥

ಪುದುವೆತ್ತೆಕ್ಕಟಿಗಾಳಿಗಂ ಸಮನಿಸಿತ್ತೆಮ್ಮ **ಗದಾಯುದ್ಧಮಂ** ।
ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ ನಭೋಭಾಗದೊಳ್ ॥
ಮದವದ್ವೈರಿಯನಿಕ್ಕಿ ಭೂವಳಯಮಂ ನಿಷ್ಕಂಟಕಂ ಮಾಳ್ಪೆನೆಂ- ।
ಬುದ [1]ನೆಂದಾಹವಲಂಪಟಂ ಮಸಗಿದಂ[1] **ಚಾಳುಕ್ಯಕಂಠೀರವಂ** ॥ ೬೮ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿಶ್ರೀಸಾಹಸಭೀಮವಿಜಯದೊಳ್ **ಭೀಮಸುಯೋಧನಗದಾಯುದ್ಧವರ್ಣನಂ** ಸಪ್ತಮಾಶ್ವಾಸಂ ಸಂಪೂರ್ಣಂ



1 ನಂದುತ್ಸುಕಚಿತ್ತನುಮ್ಮಳಿಸಿದಂ1 ಮ. ಪ್ರ. ಪಾ.

## ॥ ಅಷ್ಟಮಾಶ್ವಾಸಂ ॥

ಶ್ರೀರಮಣಿಗೆ ನೆಲೆ ತನ್ನಯ ।
ಪೇರುರಮಂ ಮಾೞ್ಪೆನೆಂಬ ಬಗೆ ಮಿಗೆ ಸಮರ- ॥
ಪ್ರಾರಂಭದೆ ಪೂಣ್ದಿರ್ದಂ ।
ಕೌರವಕುಲವಿಲಯಕೇತು **ಸಾಹಸಭೀಮಂ** ॥ ೧ ॥

ಅಂತು ಸಮರೋತ್ಸುಕಚಿತ್ತನಾಗಿ **ಸಾಹಸಭೀಮಂ** ದ್ರೋಣಾಚಾರ್ಯಂಗೆ ಮನದೊಳ್ ನಮಸ್ಕಾರಂಮಾಡಿ ದುರ್ಯೋಧನಂ ಬಲದೇವಂಗೆ ನಮಸ್ಕಾರಂಗೆಯ್ದು ಪಂಚಷಡಂಗುಲಾಯಾಮಮುಂ ಸಹಸ್ರಾಂಗುಲವಲಯನಿರ್ಮಿತಮುಮಷ್ಟಾಂಗುಲಸ್ಥೂಲಮೂಲಾಗ್ರಮುಮಪ್ಪುತ್ತಮಗದೆಯೊಳಂ ಚತುಃಷಡಂಗುಲಾಯಾಮಮುಂ ಶತಾಂಗುಲವಲಯಪರಿಮಿತಮುಂ ಚತುರಂಗುಲಾಗ್ರಮೂಲಮುಮಪ್ಪ ಮಧ್ಯಮಗದೆಯೊಳಂ ತ್ರಿಷಡಂಗುಲಾಯಾಮಮುಂ ಷಟ್ತ್ರಿಂಶದ್ವಲಯಾಂಗುಲಮುಂ ದ್ವ್ಯಂಗುಲಾಗ್ರಮೂಲಮುಮಪ್ಪಧಮಗದೆಯೊಳಂ ತಾಮುತ್ತಮಪುರುಷರಪ್ಪುದಱಿಂ ತಮಗನುರೂಪಮಪ್ಪುತ್ತಮಗದೆಯೊಳಂ ದಶಾಂಗುಲಪರಿಣಾಹಾಗ್ರಕನತ್ಕನಕಖಚಿತ್ರಾಲಂಕೃತಸ್ವರೂಪಸಮನ್ವಿತಂಗಳುಮಪ್ಪ ಗದೆಗಳುಮನಿರ್ವರುಮಾಯ್ದುಕೊಂಡು ಆಲೀಢಪ್ರತ್ಯಾಲೀಢಸಮಪಾದವೈಷ್ಣವಮಂಡಲಾಗ್ರಮುಮೆಂಬ ಪಂಚವಿಧಸ್ಥಾನಂಗಳೊಳಂ ವಾಮದಕ್ಷಿಣಬಾಹ್ಯಾಭ್ಯಂತರಾಸ್ಫಾಲನವಿಭೇದಂಗಳೊಳಂ ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂದಿಗ್ಭ್ರಾಮಿತಮುಚಿತವಿರುದ್ಧಮಚಿಂತ್ಯಮುಮೆಂಬೆಣ್ಬಂತೆಱದ [1]ಪ್ರಹರಣಂಗಳೊಳಂ[1] ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು—

ಸ್ಥಿರಬದ್ಧಮತ್ಸರರ್ ಭೀ- ।
ಕರಬದ್ಧಭ್ರುಕುಟಿಘಟಿತರದ್ಭುತರಟ್ಟಾ- ॥

---

1 ಭಯನಯಪ್ರಹರಂಗಳೊಳ್ 1—ಮ. ಪ್ರ. ಪಾ.

ಸುರರಧಿಕಕೋಪಪಾಟಲ ।
ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ ॥ ೨ ॥

ದೆಸೆದೇವತೆಗಳ್ಗೆ ಜಪಾ- ।
ಪ್ರಸೂನಮುಂ ರಕ್ತಬಲಿಯುಮಂ ತಾಂ ಕುಡುವಂ- ॥
ತೆಸೆದಿರ್ದರ್ ಕಡೆಗಣ್ಗಳ್ ।
ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ ॥ ೩ ॥

ಉರಿಯನುಗುಳ್ವಂತೆ* ಬಿಸುನೆ- ।
ತ್ತರನೆತ್ತಂ ಸೂಸುವಂತೆ ಬಿಚ್ಚನೆ ಬಿಟ್ಟಿ- ॥
ರ್ದರಡುಂ ಕಣ್ಗಳೊಳವರೊ- ।
ರ್ವರನೊರ್ವರ್ ನುಂಗುವಂತೆ ನೋಡಿದರೆನಸುಂ ॥ ೪ ॥

ಖಳದುಶ್ಶಾಸನಲೋಹಿತ ।
ಜಳಮಂ ಕುಡಿದೆನಸುಮುಳ್ಕಿಸಲ್ಕಾಱದೆ ಕ- ॥
ಣ್ಗೊಳೆ ಕಾಱುವಂತೆ ಕೌರವ ।
ಕುಳಾಂತಕಂ ತರಳತಾಮ್ರಲೋಚನನಾದಂ ॥ ೫ ॥

ಉದಯಾದ್ರಿಯುಮಸ್ತಾದ್ರಿಯು- ।
ಮುದಗ್ರಕೋಪೋತ್ಕರಂಗಳಿರ್ಪಂತಿರೆ ನೀ- ॥
ಳ್ದೊದವಿದರುನ್ನತಮೂರ್ತಿಗ- ।
ಳೊದವಿ ಗದಾಯುಧದೆ ಭೀಮಭುಜಗಧ್ವಜರುಂ ॥ ೬ ॥

ಅಂತೊದವಿ—

ಕಿಱಿಕಿಱಿದೆ ಮೆಟ್ಟಿ ಮುಂದಂ ।
ಕಿಱಿಕಿಱಿದನೆ ಸಾರ್ಚಿ ತಮ್ಮ ಗದೆಗಳನಾಗಳ್ ॥

ಕಿಱಿಕಿಱಿದೆ ತಿರುಪಿ ಮಾಣದೆ ।
ಕಿಱಿಕಿಱಿದನೆ [1]ತೂಂಕಿ ತೂಂಕಿ ನೂಂಕಿದರೆನಸುಂ[1] ॥ ೭ ॥

ಎಡದಡಿಯಂ ಪುಗಿಸುವ ಬಲ- ।
ದಡಿಯಂ ಪೋಜಗಿಡುವ ದಂಡೆಯುಂ ಸಿಟ್ಟಿನ ಕಯ್ ॥
ನಡುಗದೆ ಗದೆಯಂ ಬೀಸುವ ।
ಬೆಡಂಗು ರಂಜಿಸಿತು ಭೀಮದುರ್ಯೋಧನರಾ ॥ ೮ ॥

[2]ಕಡುಕೆಯ್ದು ಕುತ್ತಿ[2] ವಂಚಿಸಿ ।
ಬಿಡೆ ಬೀಸಿದೊಡೊಡನೆ ಬೀಸಿ ಸಿಮಿರ್ದ*ಡಿ ಕಾಲಿ- ॥
ಟ್ಟಡಿಗಿಡೆ ನಿಘಾತದಿಂ ಪೊ- ।
ಯ್ದೊಡಾಂಕೆಗೊಂಡಣ್ಮಿ ಕಾದಿದರ್ ಕಡುಗಲಿಗಳ್ ॥ ೯ ॥

[3]ಪದಘಾತಕ್ಕವನೀತಳಂ ಕಟಿಲೆ ಪಾತಾಳಾಬ್ಧಿ ತಳ್ಳಂಕಗೊಂ- ।
ಡುದದೇಕೆಂದೆನಲೂರ್ಧ್ವಲೋಕದೊಳವಾಯ್ತತ್ಯದ್ಭುತಭ್ರಾಂತಿಯುಂ- ॥
ಬುದನೆಂಬನ್ನೆಗಮಂತದೇಂ ಭುವನಮುಂ ಪರ್ಯಾಕುಲಂ ಮಾಡಲಾ- ।
ದುದೊ ದುರ್ಯೋಧನಭೀಮಸೇನರ **ಗದಾಯುದ್ಧಂ** ಕುರುಕ್ಷೇತ್ರದೊಳ್[3] ॥ ೧೦ ॥

ಧಪ್ಪರಿಘಟ್ಟಂ ಪೊಟ್ಟಿಸ ।
ಧೊಪ್ಪಧೊಗಪ್ಪೆನೆ ಧಿಧಿಲ್ ಬುಧಿಲ್ಲೆನೆ ಗದೆಗಳ್ ॥
ಸೊಪ್ಪುಸೊವಡಪ್ಪಿನಂ ಸೂಱ್ ।
ತಪ್ಪದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್ ॥ ೧೧ ॥

1 ತೂಗಿ ನೂಂಕಿನೋಡಿದರಿನಿಸಂ1–ಮು. ಪ್ರ. ಪಾ.
2 ಎಡಬಲಕೈತೋರಿ 2–ಮು. ಪ್ರ. ಪಾ.
3 ಪದಘಾತಕ್ಕಗಿದಳ್ಕಿ ಬಳ್ಕಿದುದಧೋಲೋಕಂ ಭಯಂ ಮರ್ತ್ಯಲೋ- ।
ಕದೊಳಂ ಪೊಣ್ಮಿದುದೂರ್ಧ್ವಲೋಕದೊಳೆ ಮತ್ತಾಯ್ತದ್ಭುತಭ್ರಾಂತಿಯುಂ– ।
ಬುದನೆಂಬಂತಿರೆಯುಂತದೇಂ ಭುವನಮುಂ ಪರ್ಯಾಕುಲಂ ಮಾಡಲಾ– ।
ರ್ತುದೊ ದುರ್ಯೋಧನ ಭೀಮಸೇನರ ಗದಾಯುದ್ಧಂ ತ್ರಿಧಾ ಭ್ರಾಂತಿಯುಂ ॥3
ಮು. ಪ್ರ. ಪಾ.

ಪಗಲುಳ್ಕಮುಳ್ಕವಂದದಿ– ।
ನೊಗೆವ ಗದಾಶಲ್ಕಮುಳ್ಕೆ ಕಣ್ಣಂ ಮುಚ್ಚಲ್ ॥
ಬಗೆಯೆ ದಿವಿಜರ್ ಗದಾಹವ– ।
ಮಗುರ್ವುಮದ್ಭುತಮುಮಾಯ್ತು ಕುರುಪಾಂಡವರಾ ॥ ೧೨ ॥

ಗದೆ ಗದೆಯಂ ಘಟ್ಟಿಸೆ ಪು– ।
ಟ್ಟಿದ ಕೆಂಡದ ಕಿಡಿಯ [1][ತಂಡ][1] ವೆಣ್ಬಂ ದೆಸೆಯಂ ॥
ಪುದಿಯೆ ಪದಧೂಳಿ ಗಗನದೊ– ।
ಳೊದವೆ ಸುರರ್ ಬೆದಱೆ ಕಾದಿದರ್ ಕಡುಗಲಿಗಳ್ ॥ ೧೩ ॥

ಕುರುಭೂಮಿಯೆ ಖಟ್ಗಿಡಿಗಳ್ ।
ಸುರಿಯೆ ಗಳಜ್ಜೋದರಾಗಿಳಿಗಳ್ ಕೊಟಕರಾ– ॥
ಗಿರೆ ಮುಂಬುಗಳೆದು ಕಾದಿದ– ।
ರರಿಬಿರುದರ್ ಕಾದುವಂತೆ ಕುರುಪಾಂಡುಸುತರ್ ॥ ೧೪ ॥

ಅಡಿಯಂ ಕಿಱುದೊಡೆಯಂ ಪೆ– ।
ರ್ದೊಡೆಯಂ ಪೊಱವಾಱನುಡಿಯನುರಮಂ ಮುಯ್ವಂ ॥
ಮುಡುಪಂ ಬೆನ್ನಂ ಕೊರಲಂ ।
ನಡುನೆತ್ತಿಯನೆತ್ತಿ ಪೊಯ್ದರೊರ್ವರನೊರ್ವರ್ ॥ ೧೫ ॥

ತಡದಿಂ ಕಿತ್ತಡಿಯೆಂಬುದ– ।
ದಡಿಗಿಡೆ ಪೊಕ್ಕೊಳಗು ಪೊಱಗು ಬಲನೆಡನೆಂಬೀ ॥
ಯೆಡೆಯಱಿದು ಮೆಯ್ಗಳಂ ಸೂಟಿಜ್ ।
ತಡ[2]ಮಾಡದೆ[2] [3]ಕಾಯ್ದು[3] ಪೊಯ್ದುರೊರ್ವರನೊರ್ವರ್ ॥ ೧೬ ॥

1 ಕುಂಡ 1– ಮು. ಪು. ಪಾ.

2 ವಾಗದೆ2– ,, ,,

3 ಬೈದು3–ಮು. ಪ್ರ. ಪಾ.

[1]ವಾರಣರಕ್ತಸಿಕ್ತ[1]ಮೃಗರಾಜಯುಗಕ್ಕೆ ನವಪ್ರಸೂನ[2]ದಾ- ।
ಗಾರುಣ[2]ಕಿಂಶುಕದ್ರುಮಯುಗಕ್ಕೆ ಸಧಾತುಕುಭೃದ್ಯುಗಕ್ಕೆ ಸಿಂ- ॥
ಧೂರಿತಗಂಧಸಿಂಧುರಯುಗಕ್ಕೆಣೆಯೆಂಬಿನಮಣ್ಮೆ ಕಾದಿದರ್ ।
ಕೌರವರಾಜನುಂ [3]ಕುರುಕುಲಾಂತಕನುಂ ರುಧಿರಾಕ್ತಮೂರ್ತಿಗಳ್[3]
॥ ೧೭ ॥

ಕರಿಯುಂ ಸಿಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸ್ಯಹೋ- ।
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಸ್ಸ್ಥಳ- ॥
ಕ್ಷರದಸ್ರಾಂಬುವನಾದಮ್ ಪೀರ್ದ ಮುಳಿಸಿಂಗಂ ಮೂಱುಗೊಳ್ಳೆಂದು ಮ- ।
ಚ್ಚರದಿಂದೋವದೆ ಪೊಯ್ದುನೆತ್ತಿ ಗದೆಯುಂ ದುರ್ಯೋಧನಂ ಭೀಮನಂ
॥ ೧೮ ॥

ಎಂದು ಮುಟ್ಟೆ ಮೂದಲಿಸೆ—

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂ- ।
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನಭ್ರಾಂತಿಗೆಂದೋ- ॥
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲುರಮಂ ಕೆನ್ನೆಯಂ ನೆತ್ತಿಯಂ
ಕೋ- ।
ಪದೊಳಯ್ದಂ ದುರ್ನಯಕ್ಕೆಯ್ದಿಡೆಯನುರುಗದಾದಂಡದಿಂ ಭೀಮ-
ಸೇನಂ ॥ ೧೯ ॥

ಅಂತು ಪೊಯ್ದೊಂದುಮಂ ಬಗೆಯದೆ—

ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾಗ
ಜೇಂದ್ರೋ- ।
ತ್ಕರಮಾಶಾಭಿತ್ತಿಯಿಂದಂ ಪಿಱಿದೆಗೆಯೆ ಗದಾಕ್ರಾಂತಮುದ್ಭ್ರಾಂ
ತವಿದ್ಯಾ- ॥
ಧರಚಕ್ರಂ ಗೆಂಟುಗೆಂಟಾಗಿರಿಸೆ ನಿಜವಿಮಾನಂಗಳಂ ಭೈರವಾಡಂ- ।
ಬರಮಾಕಲ್ಪಾಂತಕಾಲಂ ನೆಗೞ್ದುದು ಸಮರಂ ಭೀಮದುರ್ಯೋಧ
ನೀಯಂ ॥ ೨೦ ॥

---

1 ದಾರುಣ ರಕ್ತವಕ್ತ್ರ 1 –ಮು. ಪು. ಪಾ.
2 ಕಾಂತಾರಕ2–ಮು. ಪು. ಪಾ.
3 ಮರುತನಂದನನುಂ ರಣರಂಗಭೂಮಿಯೊಳ್3–ಮ. ಪ್ರ. ಪಾ.

ಅಂತಿರ್ವರ ಗದಾಪಟ್ಟಸಪರಿಘಸಂಘಟ್ಟನದಿಂದೊಗೆದು ನೆಗಟ್ಟ ಕಿಡಿಯ ಕೆಂಡಂಗಳ [ತಂ]ಡಂಗಳನೊಳಕೊಂಡು ಗಗನಮಂಡಲದೊಳ್ ಪೋಗೆ ನೆಗೆದು ಮಹೋತ್ಪಾತಕೇತುಚಕ್ರದಂತೆ ಸುಟ್ಟುಱಿಗಾಳಿಯೊಳ್ ಸುೞಿಗೊಂಡು ತಱಿಗೆಲೆಗಳ್ ಪಾಱುವಂತೆ ದೆಸೆದೆಸೆಗೆ ಪಾಱುವ ಘನಾಘನಚಕ್ರದಿಂದುಳ್ಕುಲ್ಕಾಕಾರಮಾಗೆ ಚಕ್ರಾಕಾರದಿನೊಗೆವ ದಿಶಾಚಕ್ರದಿಂ ಆ ಸಕಲಕುಲಾಚಲಚಕ್ರದೊಳಗೆ ಕುರುರವಚಕ್ರದಿಂದಂ ತಿಱ್ರನೆ ತಿರುಗುವ ಧರಾಚಕ್ರಭ್ರಾಂತಿಯೊಳ್ ತಮಗೆ ಚಿತ್ತಭ್ರಾಂತಿಯಾಗೆ ದೀರ್ಘೋಚ್ಛ್ವಾಸಫೂತ್ಕಾರಂಗೆಯ್ವ ನಾಗರಾಜಚಕ್ರದಿಂ ಪ್ರ್ಲುಷ್ಟಮಾದ ಸಪ್ತಸಾಗರಸಲಿಲದೊಳ್ ಮುಲಮುಲನೆ ಮುಱುಗುವ ಜಲಚರಚಕ್ರದಿನತಿಭಯಂಕರಮುಮದ್ಭುತಮುಮಾಗೆ ಕಾದುತಿರ್ಪಲ್ಲಿ—

ಅನುಸಮಮಾಯ್ತೆನೆ ದುರ್ಯೋ- ।
ಧನಶಬ್ದಂ [1]ಭೀಮಶಬ್ದಮನ್ವರ್ಥಂ ಭೀ- ॥
ಮನೆ ಗಡ ದುರ್ಯೋಧನನೆಂ- ।
ದೆನೆ ಕೌರವಭೀಮಸೇನರೇಂ ಸಮಬಲರೋ[1] ॥ ೨೧ ॥

ಸಮಕಾಯರ್ ಸಮಸತ್ತ್ವರ್ ।
ಸಮವಿದ್ಯರ್ ಸಮರದೊಳ್ ಪರಸ್ಪರಭುಜವಿ- ॥
ಕ್ರಮದವರಿವರೆನೆ ಚಕ್ರ ।
ಭ್ರಮಣದಿನನ್ಯೋನ್ಯಜಯಮನಾಱಿ ತೋಱಿಲ್ ॥ ೨೨ ॥

ನೆಲಸಿದ ಬಿನ್ನಣಂ ಸೆಣಸಿ ಬಿನ್ನಣಮಂ ಗೆಲೆ ಕಾಣ್ಕೆ ಕಾಣ್ಕೆಯಂ ।
ಗೆಲೆ ಜವಮಂ ಜವಂ ಗೆಲೆ ಬಲಂ ಬಲಮಂ ಗೆಲೆ ದಂಡೆ ದಂಡೆಯಂ ।
ಗೆಲೆ ಮುಳಿಸುಣ್ಮಿ ಪೊಣ್ಮಿ ಮುಳಿಸಂ ಗೆಲೆ ಸತ್ತ್ವದಳುರ್ಕೆ ಸತ್ತ್ವಮಂ ।
ಗೆಲೆ ಗೆಲಲಾರ್ತರಿಲ್ಲ ಕುರುಪಾಂಡುತನೂಭವರೊರ್ವರೊರ್ವರಂ ॥ ೨೩ ॥

ಅಂತು ನೆಟಿಲೊಳ್ ಪ್ರೇಕ್ಷಣೀಯಮಾಡುವಂತೊರ್ವರೊರ್ವರಂ ಗೆಲಲ್ ನೆಱೆಯದಿರೆ ದುರ್ಯೋಧನಂ ಕರಂ ಮುಳಿದು—

1 ಭೀಮಸೇನ ಶಬ್ದಂ ದುರ್ಯೋಧ ನನೆ ಗಡಂ ಭೀಮಂ ಭೀಮನೆ ಗಡ ದುರ್ಯೋಧನಂ ಗಡೇಂ ಸಮಬಲರೋ1—ಮು. ಪು. ಪಾ.

ಕುರುರಾಜಂ ವಿದ್ಯಾಧರ ।
ಕರಣದೆ ನೆಗೆದಂಬರಕ್ಕೆ ಗದೆಯುಂ ಕ್ರಮದಿಂ ॥
ತಿರುಪೆ ಧರಾಚಕ್ರಂ ಕೋ- ।
ವರ ಚಕ್ರಂ ತಿರಿವ ತೆಱದೆ ತಿರಿದತ್ತೆಸಸುಂ ॥ ೨೪ ॥

[1]ಚಿತ್ರಾಕಾರದ[1] ಗದೆಯುಂ ।
[2]ಛತ್ರವಿಡಂಬದೊ[ಳ್] ಬೀಸೆ ಗಗನದೊಳೇ[2]ಕ- ॥
ಚ್ಛತ್ರಂ [3]ಗಡ[3]ವೆಂದು ಮರು- ।
ತ್ಪುತ್ರಂಗಱಿಪುವವೊಲಿರ್ದನಾ ಕುರುಪುತ್ರಂ ॥ ೨೫ ॥

ಅಂತು ಮೂದಲಿಸದೆ ಬಱುವುದು ತುೞಿಲಾಳಾಯ್ತುಮಲ್ಲೆಂದು ಮುಟ್ಟೆಮೂದಲಿಸಿ—

ತೆಱಪಂ ನಿಟ್ಟಿಸಿ ಕುರುಪತಿ ।
ಬಱಸಿಡಿಲೆಱಗುವವೊಲ್[4]ಜಗಿ[4] ಪೊಯ್ಯಲೊಡಂ ಮೆ- ॥
ಯ್ಮಱೆದು ಪವನಜ[5]ನುಮೇನೆಂ[5]- ।
ದಱಿಯದೆ ಮತಿವಿಕಳನಾಗಿ ಮೂರ್ಛೆಗೆ ಸಂದಂ ॥ ೨೬ ॥

ಅಂತು ಕುಲಿಶಾಭಿಘಾತದಿಂ ನೀಲಾಚಲಮೆ ಕೆಡೆವಂತೆ ಕೆಡೆದು ಮೂರ್ಛಾಗತನಾಗಿರ್ದ ಭೀಮಸೇನನಿರವಂ ಕಂಡು ಗಾಂಡೀವಿ ಕೋಪಾತುರಾಟೋಪಮುಂ ತಾಳ್ದಿ—

ಎಲ್ಲಿಯು ಬಲದೇವಂ ಮ- ।
ತ್ತೆಲ್ಲಿಯು ಸತ್ಯವ್ಯವಸ್ಥೆ ದುರ್ಯೋಧನನಂ ॥

1 ಛತ್ರಾಕಾರದೆ1–ಮು. ಪು. ಪಾ.

2 ಚಿತ್ರವಿಧಂ ಬೀಸೆ ಗಗನದೊಳ್ ನಿನಗೇ 2–ಮು. ಪು. ಪಾ.

3 ಜಗ3– ಮು. ಪು. ಪಾ.

4 ಯ್ದು4–ಮು. ಪ್ರ. ಪಾ.

5 ನದೇಕೆಂ5–ಮು. ಪು. ಪಾ.

ಕೊಲ್ಲದಿರೆನೆಂದು ಭಾರತ ।
ಮಲ್ಲಂ ಗಾಂಡಿವಕೆ ನೀಱಿದಂ ಕರತಳಮಂ ॥ ೨೭ ॥

ಮುಳಿದೇವಂ ಹಲಿ ಕೃಷ್ಣಂ ।
ಮುಳಿದೇವಂ ಧರ್ಮನಂದನಂ ಮುಳಿದೇವಂ ॥
ಮುಳಿದರನಿಕ್ಕುವೆನೆಂದು- ।
ಮ್ಮಳಿಸಿದರಿಱಿಯಲ್ಕೆ ನಕುಲಸಹದೇವರ್ಕಳ್ ॥ ೨೮ ॥

ಅರಿಗಿಂಬಾಯ್ತುೞಿವಾದುದು ।
ಮರುತ್ಸುತಂಗರ್ಜುನಾದಿಗಳ್ ಮುಳಿದರ್ ಮೂ- ॥
ವರುಮೆನ್ನ ನನ್ನಿಗೀಗಳೆ ।
ಪರಿಭವಮಾಯ್ತೆಂದು ಧರ್ಮಜಂ ಚಿಂತಿಸಿದಂ ॥ ೨೯ ॥

ಅಲರ್ದ* ಹಲಧರನ ಮೊಗಮುಂ ।
ತಲೆಯಂ ಬಾಗಿರ್ದ ಧರ್ಮತನಯನ ಮೊಗಮುಂ ॥
ಜಲರುಹನಾಭಂ ಕಂಡೆರ್ದ* ।
ಕಲಂಕಿ [1]ಕಣ್ಜವುರ್[1]ಜ[ರ್ವಿ]ದಂ ಗಾಂಡಿವಿಯುಂ ॥ ೩೦ ॥

ಆ ಪ್ರಸ್ತಾವದೊಳ್ ಧಾತುನಿರ್ಜರಗಿರಿ ಕೆಡೆವಂತು ಕೆಡೆದಿರ್ದ ಪಗೆಯಂ ನೋಡಿ—

ಕೆಡೆದೊಡೆ ಪವನಜನಾಹವ- ।
ದೆಡೆಯೊಳ್ ಬಿಟ್ಟವನನಿಱಿಯಲಾಗದುವೆಂಬರ್ ॥
ಗಡಮೆಂದಂಬರತಳದೊಳ್ ।
ಪೊಡವೀಶಂ ಗದೆಯನೆತ್ತಿ ತಿರಿಪಿದನಾಗಳ್ ॥ ೩೧ ॥

ಆ ಪ್ರಸ್ತಾವದೊಳ್ ಧರ್ಮಯುದ್ಧಮಂ ನೆನೆದು—

ಇಱಿಯೆಂ ಬಿಟ್ಟನನೆಂಬೀ ।
ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಟಿ- ॥

1 ಪುರ್ವಿಂದೆ 1 — ಮ. ಪ್ರ. ಪಾ.

ಟ್ಟಿಱಿಸಿದುದು ಭೀಮನಂ ಮೆ- ।
ಯ್ಯೞಿವವನಂ ತಂದೆಸುತರ್ಗೆ ಕೂರದರೊಳರೇ ॥ ೨೨ ॥

ದಾನಿಯುಮಂ ಶೂರನುಮಂ ।
ತಾನೆಟ್ಟಿಱಿಕುಂ ಗದಾನಿಲಂ ಮೂರ್ಛಿತನಂ ।
ದೀನನುಮಂ ಪಂದೆಯುಮಂ ।
1[ಸೇನಿಯನೆಟ್ಟಿಱಿಕುಮಬ್ಬ ವೀಜನ]1ಪವನಂ ॥ ೨೩ ॥

ಜ್ವಳನಸಖಸುತನ ಮೂರ್ಛೆಯೆ ।
2ತ್ತಿಳಿದುಂ ಮುಂ ತಿಳಿಯಲಿಲ್ಲ ಕಣ್ಣಳೊಳಂತ- ॥
ವ್ವಳಿಪ2 ಕಡುಗೆಂಪು ಕೌರವ ।
ಕುಳಂಗೆ ಕಡುಮುಳಿದ ಜವನ ಕಣ್ಬೇಡಿಸಪ್ಪೊಲ್ ॥ ೨೪ ॥

ಅಂತು ಮೂರ್ಛೆಯಿಂ ಮಾರುತಿಯೆೞ್ತರ್ಪಾಗಳ್ —

ಪೊಡೆಯುಲರಾತಂ ರಾಗದೆ ।
ತೊಡೆಯಂ ಪೊಯ್ದಾರ್ವ ನವಪೆ ನೆಱಸೀತಂಗೀ ॥
3ಯೆಡೆಯೆಂದು ತೋಱಿಕುಡೆ3 ಪೊಲ- ।
[ಗಿಡ]ದಱಿದಂ ಪರಮಪಂಡಿತಂ ಪವನಸುತಂ ॥ ೨೫ ॥

ತಿಳಿದಾಗಳ್ 4ನೆನೆವಿಂ4ತುಟಿಂದು ನೆಲನಂ ಮಾಱುಪ್ಪಿ ಕಯ್ಯಂ ಧರಾ- ।
ತಳದೊಳ್ ಸಾಸಿದ ತನ್ನ 5ಚಿತ್ರ5ಗದೆಯಂ ಕಂಡೆತ್ತಿಕೊಂಡಂಬರ- ।
ಸ್ಥಳದಿಂದಂ ಸಿಡಿಲೇೞ್ಗೆಯಿಂದೆಱಗಿ ಪೊಯ್ವಾಗಳ್ ಗದಾದಂಡದಿಂ ।
ಮುಳಿದಿಟ್ಟಂ ಕಲಿ ಸತ್ತಿಗಂ ಕುರುಕುಭೃಚ್ಚಂಡೋರುದಂಡಂಗಳಂ ॥ ೨೬ ॥

---

1 ತಾನೆಚ್ಚಱಿಕಜ್ಜದಳದಸಾರಂ 1 — ಮು. ಪು. ಪಾ.
2 ತಿಳಿದುದನಾಂ ನೋಡಿ ತಿಳಿದೆ ಕಡೆಗಣ್ಣಿಂದು । ಜ್ವಳಿಪ 2 — ಮು. ಪು. ಪಾ.
3 ತೊಡೆಯೆಂದು ತೋಱಿದೊಡೆ 3 — ಮ. ಪ್ರ. ಪಾ.
4 ನೆಱನಿಂ 4 — ಮು. ಪು. ಪಾ.
5 ತೀವ್ರ 5—ಮ. ಪ್ರ. ಪಾ.

ಇಡೆ ತೊಡೆಯನುಡಿದು ನೆಟ್ಟನೆ ।
ಕೆಡೆಯುತ್ತುಂ ಕರ್ಚಿ ನೆಲನನಾಸಿದನೆಂತುಂ ॥
ಬಿಡೆನೆಂಬ ತೆಱದೆ ಕುಲಗಿರಿ ।
ಕೆಡೆವಂದದೆ [1]ಕೌರವೇಂದ್ರನಾಗಳ್ ಕೆಡೆದಂ[1] ॥ ೩೭ ॥

ಅಂತು ದಿಕ್ಕರಿವರಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲಮಹೀಶನ ಬಾಳಕದಳೀಸ್ತಂಭಂಗಳನನುಕರಿಸುವ ತೊಡೆಗಳ ನುಡಿದು ಅಶ್ರಮದೊಳ್ ಪುಡಿಯೊಳ್ ಪೊರಳ್ಚಿ ತನ್ನ ಮುನ್ನ ನುಡಿದೂರುಭಂಗಪ್ರತಿಜ್ಞೆಯುಂ ತೀರ್ಚಿ ಮಕುಟಭಂಗಪ್ರತಿಜ್ಞೆಯುಂ ತೀರ್ಚಲೆಂದು ಕುರುಕುಲಾಂತಕಂ ಮಾಮಸಕಂಮಸಗಿ—

ಇದು ಭುವನಾಧಿಪತ್ಯಸವನೋದಕದಿಂ ಗಡ ಪೂತಮಾದುದಿಂ- ।
ತಿದು ಧವಳಾತಪತ್ರದ ನೆೞಲ್ಗೆ ಗಡಂ ಗುಱಿಯಾದುದಾರ್ಗಮಿಂ- ॥
ತಿದು ಗಡ ಬಾಗದೀ ತಲೆಗೆ ತಕ್ಕುದನೀಗಳೆ ಮಾೞ್ಪೆನೆಂದು ಕೋ- ।
ಪದಿನೊದೆಯಲ್ಕೆ ಸಾರ್ತರೆ ಸಪತ್ನ[2]ನ[ತೋರು][2]ಕಿರೀಟಭಂಗಮಂ॥೩೮॥

ಬಲದೇವಾದಿಗಳಾಗದಾಗದೊದೆಯಲ್ಕೇಕಾದಶಾಕ್ಷೋಹಿಣೀ ।
ಬಲಲಕ್ಷ್ಮೀಪತಿಯುಂ ಪರಾಭವಿಸದಿರ್ ಛೀ ತಕ್ಕುದಲ್ಲೆಂದು ಮಾ- ॥
ಕೊರ್ಳೆಯುಂ ಮಾಣದೆ ಭೀಮಸೇನನೊದೆದಂ ವಾಮಾಂಘ್ರಿಯಿಂ ರತ್ನಮುಂ- ।
ಡಲರಶ್ಮಿಪ್ರಕಟೋಜ್ಜ್ವಲನ್ಮಕುಟಮಂ ಕೌರವ್ಯರಾಜೇಂದ್ರನಾ ॥ ೩೯ ॥

ಒದೆದ ಭರದಿಂದಮುಚ್ಚಳಿ- ।
ಸಿದ ದುರ್ಯೋಧನನ ಮಕುಟಮಣಿಗಳವೆತ್ತಂ ॥

1 ಕೆಡೆದು ಕೌರವೇಂದ್ರಂ ನುಡಿದಂ 1 — ಮು. ಪು. ಪಾ.

2 ಹತೋರು 2 — ಮು. ಪು. ಪಾ.

ಕೆದಱಿದುವಿಱಿವಬೆಡಂಗನ ।
ಪ್ರೊದಟ್ವ ಕೋಪಾಗ್ನಿದಹನ[1]ದಾಳ್ಕಿಡಿಗಳವೋಲ್[1] ॥ ೪೦ ॥

ಅಂತು ಗುಣರತ್ನಾರ್ಣವಂ ಪ್ರತಿಜ್ಞಾ[2]ಪೂರ್ಣನುಮಾಗೆ[2] —

ತ್ರಿದಶೇಂದ್ರಂ [3]ಜಂಭ[3]ನೊಳ್ ತಱ್ತಿಱಿದ ಸಮರಮಂ ನೋಡಿದಂ [4]ರಾಮಚಂದ್ರಂ ।
ತ್ರಿದಶೇಂದ್ರಾರಾತಿಯೊಳ್ ತಱ್ತಿಱಿದ ಸಮರಮಂ ನೋಡಿದಂ[4] ಕಂಡೆ[ವಿ]ಲ್ಲಂ— ॥
ಕದ ಗಂಡಂ **ಸಾಹಸಾಂಕಂ [5]ಸುಭಟರಜನನಿಂ**[5] ಮುನ್ನಮೆಂ[6]ದುಂ[6] ನಭೋಭಾ— ।
ಗದೊ[7]ಳಂ ತದ್ದೇವತೂರ್ಯಸ್ವನಘನರವದಿಂದಾಡಿದರ್ ನಾರದಾದ್ಯರ್[7] ॥ ೪೧ ॥

ಸುರ[8]ತರು[8]ಕುಸುಮೋತ್ಕರಮಂ ।
ಸುರಿಯೆ ಸುರಾಂಗನೆಯರುಲಿಯೆ ಸುರದುಂದುಭಿಗಳ್ ॥
ಪರಮಾಶೀರ್ವಚನಪರಂ— ।
ಪರೆಯಿಂದಂ ಮೆಚ್ಚಿ ಪರಸಿದರ್ **ಸತ್ತಿಗನಂ** ॥ ೪೨ ॥

ಬಲದೇವಂ [9]ಭೀಮನಭುಜ ।
ಬಲದೇವಂ ಮನಮನಲೆಯೆ[9] ಕುರುಪತಿಯುಂ ಮಾ- ॥

---

1 ದಳ್ಳುರಿಗಳವೋಲ್ 1 — ಮು. ಪ್ರ. ಪಾ.

2 ರ್ಣನುಮಾಗಿ 2—ಮು. ಪು. ಪಾ.

3 ದೈತ್ಯ 3 — ಮು. ಪು. ಪಾ.

4 ವಿಷ್ಣುಭಾರ್ಗರ್ ಕದನಕ್ಕೊಂದಾಗಿ ಪೂಣಂದಿನಗುರ್ವಮಪಾಯುದ್ಧಮುಂ 4 — ಮು. ಪ್ರ. ಪಾ.

5 ಗೆಣೆಸುಭಟರನಾಂ 5 — ಮು. ಪು. ಪಾ.

6 ದಾ 6 „

7 ಳಾಗಳ್ ದೇವತೂರ್ಯಧ್ವನಿಗಳೆಸೆಯುಲಂತಾಡಿದಂ ಬ್ರಹ್ಮಪುತ್ರಂ 7—ಮು.ಪು.ಪಾ.

8 ರುಂ 8 — ಮು. ಪು. ಪಾ.

9 ಭೀಮನುಮಂ ಛಲದಿಂದಂ ಕೆಣ(ಕುತಂ)ದು 9 — ಮು. ಪ್ರ. ಪಾ.

ಕೊರ್ಳೆ[1]ಯುಂ ಪರಿಭವಿಸಿದನೆಂ[1]– ।
ದಳವಲ್ಲದೆ ಮುಳಿದು ಕೆಳ*ರ್ದರ್ [2]ನೋಡುತ್ತಿರ್ದರಂ[2] ॥ ೪೩ ॥

ಅಂತು ಮುಳಿದಿರ್ದರ್ ತನ್ನ ತಮ್ಮನ ಮನಮಂ ನೋಯಿಸಲಾಱದೆಯುಂ ದುರ್ಯೋಧನಂಗಾದವಸ್ಥೆಯಂ ನೋಡಲಾಱದೆಯುಂ ಬಲದೇವಂ ದ್ವಾರಾವತಿಗೆ ಪೋದನನ್ನೆಗಮಿತ್ತಲ್ —

ಧಾತ್ರೀಪತಿಗಱಿಪಿ ಮರು– ।
ತ್ಪುತ್ರಂ ಬಱಿಯಟ್ಟಿ ಕರೆಸಿ ತೋಱಲ್ಕೇಕ– ॥
ಚ್ಛತ್ರೀಕೃತಜಗದಹಿತ ।
ಕ್ಷತ್ರಿಯಕುಳಕಾಳರಾತ್ರಿಯಂ ದ್ರೌಪದಿಯಂ ॥ ೪೪ ॥

ಮುಳಿಸಿಂ ನಂಜಿಕ್ಕಿ ಕೊಂದಂದಿನ, ಜತುಗೃಹದೊಳ್ ಸುಟ್ಟು ಕೊಂದಂದಿನುರ್ವೀ– ।
ತಳಮಂ ಜೂದಾಡಿ ಗೆಲ್ದಂದಿನ,ನಿಜಕಬರೀಬಂಧಮಂ ತನ್ನ ಸತ್ರೋ– ॥
ಜ್ಜ್ವಳದಿಂದಂ ತಮ್ಮನಿಂದಂ ತೆಗೆಯಿಸಿ ನಡೆದಾ ನೀಚನಾ ದ್ರೋಹನಾ ಸಂ–।
ಚಳನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ ॥ ೪೫ ॥

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮಾ ನಾಲ್ವರುಂ ಸಂಗರಾ– ।
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತವ್ರತಾ– ॥
ಚರಣವ್ಯಾಪಿಕೆಯುಂ ಭವತ್ಪರಿಭವಂ ಸಂಚಾರಕಂ ಕೌರವೇ– ।
ಶ್ವರನೀತಂ ಪಶುವಾಗೆ ಬೇಳ್ವೆನಿವನಂ ಕೋಪಾಗ್ನಿಯಿಂದಗ್ನಿಜೇ ॥ ೪೬ ॥

ಸುಹುತಂ ಕೌರವ್ಯಕ್ರ– ।
ವ್ಯಹವ್ಯದಿಂದೆನ್ನ ಕೋಪಹವ್ಯವಹಂ ದು– ॥
ರ್ವಹದುರ್ಯೋಧನದೇಹ ।
ಪ್ರಹರಣಲೋಹಿತದಿನಾದುದವಭೃಥಸವನಂ ॥ ೪೭ ॥

1 ಯುಂ ಪರಿಭವಿಸಿದನೆಂದಂ 1–ಮು. ಪು. ಪಾ.
2 ಕಿರ್ಚೆದರ್ಗಳ್ 2 ,,

ಎಂದು ಭೀಮಸೇನಂ ಯಾಜ್ಞಸೇನಿಗಾದಿತ್ಯನ ಸಾರಥಿಯಿರ್ಪಂತೆ ನಿಜೋರುಯುಗಳವಿಕಳನಾಗಿರ್ದ ದುರ್ಯೋಧನನಂ ತೋಱಿ—

ಪಗೆ ಮಡಿದುದು ಮುಡಿಯೆನೆ ನಗೆ ।
ಮೊಗದಿಂ ಪಾಂಚಾಲೆ ಮಱುಗಿದನಾಂ ಪಲಕಾಲಂ ॥
ನಿಗತಾಭ್ಯಾಸದೆ ಸತ್ತಿಗ ।
ಪಗೆಯುಂ ಮಡಿಯಿಸಿದೆ ನೀನೆ ಮುಡಿಯಲ್ವೇೞ್ಕುಂ ॥ ೪೮ ॥

ಎಂದು ತನ್ನ ಕಯ್ಯಂ ಪಿಡಿದು ತೆಗೆವುದುಮಂತೆಗೆಯ್ವೆನೆಂದುಮಾಕೆಯ **ವೇಣೀಸಂಹಾರಮುಂ** ತಾನೆ ಮಾಡಿ—

ಬವಱೊಳ್ ಬಾಹಾಬಳಾಗ್ರ್ಯರ್ ಮಣಿಮುಕುಟಧರರ್ ಕೃಷ್ಣೆ ಮೂರ್ಧಾಭಿಷಿಕ್ತರ್ ।
ಕದನಪ್ರೋಚ್ಚಂಡದಂಡಕ್ರಮವಿಜಿತರಿಪುಕ್ಷತ್ರಿಯರ್ ವೀರಲಕ್ಷ್ಮೀ ॥
ಸದನರ್ ಸೋಮಾಮೃತಾಸ್ವಾದನ[1]ಶುಭವಚನರ್[1] ಮುನ್ನಮುೞ್ಬಾಡಿದರ್ ನೋ— ।
ಡಿದು ನಿನ್ನೀ ಕೇಶಪಾಶಂ ಕುರುಕುಲಪತಿಗಾಯ್ತಲ್ತೆ ಕೀನಾಶಪಾಶಂ ॥೪೯॥

ಎಂದು ಪೊಗೞ್ದು ಮಾಂಗಲ್ಯಮಾಲಾಲಂಕೃತಂ[2]ಮಾಡೆ[2] —

ಸ್ಮರಸಂಜೀವನೆ ಕೃಷ್ಣೆ ಪೂಮುಡಿ[3]ದಳಾ[3] ಶೃಂಗಾರಮಾ ಭಾವಮಾ ।
ಸರಿಜಾ ವಿಭ್ರಮಮಾ ಬೆಡಂಗು *ನೆಗೞ್ದಾ ಸೌಂದರ್ಯಮಾ ಬಿಂಕಮಾ ॥
ತರಳಾಪಾಂಗವಿಲಾಸಮಾ ಲಟಹಮಾ ಲಾವಣ್ಯಮಾ ಪುಣ್ಯಮಾ ।
ದರಹಾಸಾಮೃತಮೇಂ ಮನಂಗೊಳಿಸಿತೋ **ಚಾಳುಕ್ಯಕಂದರ್ಪನಾ** ॥ ೫೦ ॥

1 ರುಚಿವದನರ್1–ಮು. ಪು. ಪಾ.
2 ಮಾಡಿ ನೋಡಿದಾಗಳ್2– ಮು. ಪ್ರ. ಪಾ.
3 ದೊಡಾ3– ” ”

ಅಡಿ ಕಿಱುದೊಡೆ ಪೆರ್ದೊಡೆ ಕಟಿ ।
ನಡು ನೊಲೆ ತೋಳ್ ನೀಳ್ದಬೆರಲುಗುರ್ ಕೊರಲಂದಂ- ॥
ಬಡೆದ ಮೊಗಂ ಸುೞಿಗುರುಳ್ಗಳ್ಗೆ- ।
ಮುಡಿ! ನೋಡಲ್ ನಾಡೆ! ಸೊಗಯಿಕುಂ ದ್ರೌಪದಿಯಾ ॥೫೧॥

ಗಳರೇಖಾಕೃತಿ ಭೂಮಿರೇಖೆ ದಶನಂ ವಜ್ರಂ ವಿಲೋಲೇಕ್ಷಣಂ ।
ದಳಮುದ್ಭ್ರೂಲತೆ ಕರ್ಣಿಕಾವಿಳಸನಂ ನಾಸಾಪುಟಂ ಸಂಪುಟಂ ॥
ಗಳನಾದಾಕ್ಷರಮಕ್ಷರಂಗಳೆನೆ ಕಾಶ್ಮೀರಾದಿಲಿಪ್ತಂ ಮನಂ- ।
ಗೊಳೆ ಕಂದರ್ಪನ ವಶ್ಯಯಂತ್ರಮೆನಿಸಿತ್ತಾಸ್ಯಂ ಸರೋಜಾಸ್ಯೆಯಾ ॥೫೨॥

ತಿಂಗಳ ಪಡಿಚಂದ್ರಂ ಕಮ- ।
ಲಂಗಳ ಮಱುವಕ್ಕಮುಚ್ಚ್ರಿತಿಗೊಳನಾ ಚೆ- ॥
ಲ್ವಿಂಗಿದೆ ದಾಯಿಗಮೆನೆ ಲಲಿ- ।
ತಾಂಗಿಯ ನಗೆಮೊಗಡ ಪೋಲ್ವೆಗೆಣೆ ಪೆಱವೊಳವೇ ॥ ೫೩ ॥

ನಗೆಗಣ್ಗಳೊಪ್ಪುವಱೆಗಳ್ ।
ಸೊಗಯಿಸೆ ಕರಚರಣತಳದ ಮೆಲ್ಪೆಸೆಯೆ ಮನಂ- ॥
[2]ಬುಗುವಳ್ ಪೂಗಣೆ [ವೊಲ್] ತಾಂ[2] ।
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥ ೫೪ ॥

ತರಳಂಗಳ್ ತರಳಾಯತಂಗಳತಿತೀಕ್ಷ್ಣಂಗಳ್ ಚಕೋರೇಕ್ಷಣ- ।
ಸ್ಫುರಿತಂಗಳ್ ಮದನಾಯುಧಾಕೃತಿಗಳಾಕರ್ಣಾಂತರಂಗಳ್ ಮನೋ- ॥
ಹರವರ್ಣಾಕೃತಿಗಳ್ ವಿಭಾಸಿಗಳತಿಸ್ನಿಗ್ಧಂಗಳಂಭೋಜಭಿ- ।
ನ್ನರುಚಿಸ್ಪರ್ಧಿಗಳಕ್ಷಿಗಳ್ ಬಹುಳಪಕ್ಷ್ಮಂಗಳ್ ಕುರಂಗಾಕ್ಷಿಯಾ ॥ ೫೫ ॥

ಅತಿನಿಬಿಡಂಗಳ್ ವೃತ್ತೋ- ।
ನ್ನತಂಗಳತಿ[3]ಪೀವರಂ[3]ಗಳತಿಕಠಿಣಂಗಳ್ ॥

1 ಯುಂ ಜವ್ವನದೆ1–ಮು. ಪ್ರ. ಪಾ.
2 ಬುಗಲಾರ್ತರ ರಮಣಿಯುವೋಲ್2–ಮು. ಪ್ರ. ಪಾ.
3 ಕರ್ಕಶಂ3–ಮು. ಪ್ರ. ಪಾ.

ರತಿರಮಣಕುಂಭಿಕುಂಭಾ- ।
ಕೃತಿಗಳ್ ಕಳಶೋಪಮಂಗಳವಳ ಕುಚಂಗಳ್ ॥ ೫೬ ॥

(ಲಲಿತವೃತ್ತಂ)

ತಾರಕನಖಂ ನವಸರೋರುಹದಳಾಂಘ್ರಿ [ವರ] ಚಾರುಘನನಾಭಿ [ಪುಳಿನ] ಸ್ಥಳಸಿತಂಬಂ ।
ಹಾರಲತಿಕಾಕೃತಿವಿಹಾರಸಿಬಿಡಸ್ತನಸರೋರುಹಯುಗಂ ಮದನಪಂಚಶರ ಹಸ್ತಂ ॥
ಸ್ಮೇರವದನಂ ಚಳಚಕೋರನಯನಂ ಚತುರಹಾರಮೃದುಕುಂತಳಕಳಾಪ ಮಳಿಕೇಶಂ ।
ಚಾರುರುಚಿಸೂತ್ರಸುಕುಮಾರಮೆಸೆಗುಂ ಹೃದಯಹಾ[ರಿ] ಪೊಗಬಲ್ಕ [ಜೀಯೆನಾ] ಸತಿಯ ರೂಪಂ ॥ ೫೭ ॥

ಸ್ತನಕುಂಭಂ ಪೂರ್ಣಕುಂಭಕ್ಕೆಣೆಯೆನೆ ವಳಿರೇಖಾತ್ರಯಂ ರೇಖೆಗೊಂಡ ।
ತ್ರ್ಯನೆ ನಾಭೀಮಂಡಲಂ ಮಂಡಲದೊಳನುಗತಂ ಬರ್ಹಿರೋಮಾವಳೀಕಾಂ-
ಚನಕಾಂಚೀದಾಮಪಾತ್ರಂ ಜಘನಜಗತಿಯೊಳ್ ಶೋಭಿಸಲ್ ಕಾಮನ ಸ್ವೋಮ್ರೇ- ।
ಹನಮೋಹಂಗೆಯ್ವನಂಗೋದ್ಭವನೆನೆ ವನಿತಾರೂಪಮಾಶ್ಚರ್ಯರೂಪಂ ॥ ೫೮ ॥

ಚಳದಳಕಪ್ರತಾನವನದುರ್ಗಮನೆಯ್ದಿ ಬೃಹನ್ನಿತಂಬಮಂ- ।
ದಳಜಲದುರ್ಗದೊಳ್[1]ಸುಬೀದು[1] ತುಂಗಕುಚದ್ವಯಶೈಲದುರ್ಗಮಂ ॥
[2]ತಳೆದ[2] ದರ್*ರ್ಪಜ[3]ದಂಗಜನುಮಾ ಹರ[3]ಭೀತಿಯಿನಿರ್ಪವೊಲ್ ಪ್ರಿಯಂ- ।
ಗೆಳೆಯಳ ರೂಪು ಭಾವಿಪೊಡೆಯಂಗಜರಾಜನ ದುರ್ಗಮೆನ್ನಿರೇ ॥ ೫೯ ॥

ಬೆಳ*ರ್ವಾಯಿಂತಾಗವೇಡಾ ಬಿಗಿದೊಗೆವ ಕುಚದ್ವಂದ್ವವಿಂತಾಗವೇಡಾ ।
ನಳಿತೋಳಿಂತಾಗವೇಡಾ ತೊಳಪ ತೊಡೆಗಳಿಂತಾಗವೇಡಾ ನಿತಂಬ ॥

1 ಪುದಿದು1–ಮು. ಪ್ರ. ಪಾ.

2 ಚಳಿತ2–ಮು. ಪು. ಪಾ.

3 ಯುಂ ಮದನನಾಹವ3–ಮು. ಪು. ಪಾ.

ಸ್ಥಳದೊಳ್ಪಿಂತಾಗವೇಡಾ ಸೊಗಯಿಪ [1]ನಗೆಗಣ್ಗೋಟ[1] ಪಿಂತಾಗವೇಡಾ ।
ಕೊಳದಿಂದಂ ಬಂದ ಲಕ್ಷ್ಮೀವಧುವೆನಿಸುವ ಪೆ[2]ಣ್ಬಾವಪಿಂ[2] ತಾಗವೇಡಾ
॥ ೬೦ ॥

ಪನ್ನಿರಡು ಬರಿಸಮುಲಸದೆ ।
ಬನ್ನದ ಕೂಟುಂಡು ಬರ್ದುಟಲ್ ಪಿಂಗಲೊಡಂ ॥
ತನ್ನಿಂ ಕಾಳಿಕೆ ಪಿಂಗಿದ ।
ಪೊನ್ನಿನ ತೆಜಿನಂತೆ ಕಾಂತೆ ಕರ್ಗಮೆಸೆದಿರ್ದಳ್ ॥ ೬೧ ॥

ಅಂತಿರ್ದ ಜಾತವೇದೋಜಾತೆಯ ಪಾರಿಜಾತಪಲ್ಲವೋಲ್ಲಸಿತಸಿತಾವ ಕೋಮಲಕರತಳಸ್ಪರ್ಶನದೊಳಂ ಕರ್ಣಾಂತವಿಶ್ರಾಂತವಿಕಚಸುಂದರೇಂದೀವರಕುಸುಮಮಾಲಾನುಕಾರಿಕಟಾಕ್ಷಚ್ಛಟಾಚ್ಛೋಟನದೊಳಂ ಅಪಗತ ಸಮರಪರಿಶ್ರಮನಾಗಿ—

ಕೃತಕರಿಪು[3]ಧಾರ್ತರಾಷ್ಟ್ರ ।
ಪ್ರತಿಜ್ಞೆಯಂ ತೀರ್ಚಿ ದ್ರುಪದಜಾ[ಕಚ]ಕೃತಸು— ॥
ಪ್ರ[ತಿಕಾರಂ] ಸಂದು[ದಜಿಂ] ।
ಕೃ[3]ತಕೃತ್ಯಂ ಸಿದ್ಧಸಾಧ್ಯನಿಜೀವಬೆಡಂಗಂ ॥ ೬೨ ॥

ಗುರುಪಾದಾಂಬುರುಹಕ್ಕೆ ಮುಗ್ಗಿ ಪೊಡೆವಟ್ಟಿಂಗುಂ ಭುಜಂಗೇಂದ್ರಭೀ— ।
ಕರಬಾಹುಭ್ರಮಿತಾಭ್ರವಿಭ್ರಮಗದಾನಿರ್ಘಾತನಿಷ್ಪಿಷ್ಟನಿಂ— ॥
ಧುರಮೇದೋಸ್ರರಸಾರ್ದ್ರವಾರಣರಣಕ್ಕ್ಷೋಣೀತಳಂ[4] ಕೌರವೇ ।
ಶ್ವರ[4]ಚೂಡಾಮಣಿ[5]ಚೂರ್ಣಕಲ್ಕಕುಲದಿಕ್ಚಕ್ರಂ[5] ಹಿಡಿಂಬಾಂತಕಂ ॥ ೬೩ ॥

1 ಕಡೆಗಣ್ಗೊಪ್ಪ 1 — ಮ. ಪ್ರ. ಪಾ.

2 ಪೆಣ್ಣಾದೊಡಿಂ 2 ,,

3 ರುಧಿರಪಾನ : ಪ್ರತಿಜ್ಞ[ಕಂ ದ್ರೌ]ಪದೀಕಚೋತ್ತಂಸಂ ತ್ರಿ : । ಕೃತಸತ್ಪ್ರತಿಜ್ಞಕಂ ಸತ್ಯ 3 — ಮು. ಪ್ರ. ಪಾ.

4 ತಾರಕೇಶ್ವರ 4 — ಮ. ಪ್ರ. ಪಾ.

5 ಪೂರ್ಣಶಂ[ಖ]ರವ[ದಿ]ಕ್ಚಕ್ರಂ 5 ,,

ಹರಿ ಕೇಳ್ ಧರ್ಮಜ ಕೇಳ್ ಸುರೇಂದ್ರಸುತ ಕೇಳ್ ಮಾದ್ರೀಸುತರ್ ಕೇಳಿಮಿ- ।
ರ್ವರುಮಿಂತೆಯ್ದಿದುದಲ್ತೆ ಕೌರವಹತಿವ್ಯಾಪಾರದೊಳ್ ದ್ರೋಹದು- ॥
ರ್ಧರದುಶ್ಶಾಸನರಕ್ತಪಾನವಿಧಿ ಪಾಂಚಾಲೀಕಚೋತ್ತಂಸನಂ ।
ಕುರುರಾಜೋರುಕಿರೀಟಭಂಗವಿನಿತುಂ ಭೀಮಪ್ರತಿಜ್ಞಾಕ್ಷರಂ ॥ ೬೪ ॥

ಎಂದು ಭೇರಿಯುಂ ತಾಟಿಸಿದಂತೆ ಗಂಭೀರಧ್ವನಿಯಿಂ ಗರ್ಜಿಸೆ—

ಹರಿಯುಂ ಧರ್ಮಜನುಂ [1]ಸುರೇಂದ್ರಸುತನುಂ[1] ಮಾದ್ರೀಜರುಂ ಕೃಷ್ಣೆಯುಂ ।
ಪರಮಾನಂದದೆ ಕರ್ಚಿ ತೀರ್ಥಜಲದಿಂ ಕಸ್ತೂರಿಕಾಚಂದನಾ- ॥
ಗುರುಕಾಶ್ಮೀರಜಪಂಕದಿಂ ತೊಡೆದು ಕೇಯೂರಾದಿಯಿಂ ಭೂಷಣೋ- ।
ತ್ಕರಮಂ ನೇರ್ಪಡೆಕಟ್ಟಿ ಪೂಜಿಸಿದರಾ ದೋರ್ದಂಡಮಂ ಭೀಮನಾ ॥ ೬೫ ॥

ಆ ಪ್ರಸ್ತಾವದೊಳ್ —

ಅಸುಹೃನ್ಮಾಂಸದಿನಸ್ಯರಕ್ತಮಧುವಿಂ ವಿದ್ವಿಟ್ಶಿರೋಬ್ಜಂಗಳಿಂ- ।
ದಸಮಾಮಿತ್ರಕಠೋರದಂತಕುಲದಿಂ ರೌದ್ರಾರ್ಚನಾದ್ರವ್ಯದಿಂ- ॥
ದೊಸೆದಾಗಳ್ ಬಲವಂದು ಮುಗ್ಗಿ ಪೊಡೆವಟ್ಟುತ್ಸಾಹದಿಂ ತಾನೆ ಪೂ- ।
ಜಿಸಿದಂ ಸಾಹಸಭೀಮನಾಹವಜಯೋ[2]ದ್ದ[2]ಂಡಂ ಗದಾದಂಡಮಂ ॥ ೬೬ ॥

ಅಂತು ಭುಜದಂಡಮುಮಂ ಗದಾದಂಡಮುಮಂ ಪೂಜಿಸಿ—

ವಿವಿಧಾತೋದ್ಯರವಂ ಪೊದಟ್ಟಿ ಖಳದಿಕ್ಚಕ್ರಂಬರಂ ಕೂಡೆ ಪೊ- ।
ಣ್ಮುವಿನಂ ಮಂಗಳಗೀತ [3]ಮಂಗಳರವಂ[3] ಕರ್ಣಾಮೃತಸ್ಯಂದಿ [4]ಯು[4]- ॥

---

1 ಕಿರೀಟಧರನುಂ2—ಮೈ. ಪ್ರ. ಪಾ.

2 ಚ್ಚ2— ಮ. ಪ್ರ. ಪಾ.

3 ನುಂ ಬುಧರವಂ3—ಮೈ. ಪ್ರ. ಪಾ.

4 ಪೊ4— „

ಣ್ಮವಿನಂ ದೇವನಿನಾದಮುಣ್ಮವಿನಮತ್ಯುತ್ಸಾಹದಿಂ ಪೊಕ್ಕ[1]ಸು ।
ತ್ರವಬದ್ಧಸ್ವನರಮ್ಯತಜ್ಝಿಬಿರಮಂ[1] **ಚಾಳುಕ್ಯಕಂಠೀರವಂ** ॥ ೬೭ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀ **ಸಾಹಸಭೀಮವಿಜಯದೊಳ್ ದುರ್ಯೋಧನಮಕುಟೋರು[2]ಭಂಗ[2]ವರ್ಣನಂ** ಅಷ್ಟಮಾಶ್ವಾಸಂ ಸಂಪೂರ್ಣಂ ॥



1 [ನಾನ]ವತೇಜಂ ಸುಖರಮ್ಯಮಂ ಶಿಬಿರಮಂ1– ಮ. ಪ್ರ. ಪಾ.
2 ತಾಟನ2–ಮ. ಪ್ರ. ಪಾ.

## ॥ ನವಮಾಶ್ವಾಸಂ ॥

'ಶ್ರೀಸೋಮವಂಶಕಮಲೋ- ।
ದ್ಭಾಸಿಸರೋಹಂಸನಗ್ರಜಾನುಜಸಹಿತಂ ॥
ಶ್ರೀಸತ್ಯನಿಲಯನಧಿಕವಿ- ।
ಳಾಸಂ ಸುಖವಿರ್ದನಲ್ತೆ ಸಾಹಸಭೀಮಂ' ॥ ೧ ॥

ಅಂತಿರ್ಪನ್ನೆಗಂ ಚಕ್ರಿ ತಾಂ ಕಾಲಚಕ್ರವರ್ತಿಯಪ್ಪುದಱಿಂದಸಮಸಾಹಸೋದ್ಭಾವನಪ್ಪಶ್ವತ್ಥಾಮನ ಬರವನಱಿದನಾಗತಬಾಧಾಪರಿಚ್ಛೇದನಂ ಮಾಡಲೆಂದು ಧೃಷ್ಟದ್ಯುಮ್ನಶಿಖಂಡಿಚೇಕಿತಾನಯುಧಾಮನ್ಯೂತ್ತಮೌಜರುಮಂ ಶ್ರುತಸೋಮಕಪ್ರಮುಖರಪ್ಪ ಪಾಂಡವಸೂನುಗಳಪ್ಪ ಪಂಚಪಾಂಚಾಲರುಮಂ ಬೀಡಿಂಗೆ ಕಾಪುವೇೞ್ದು ಹಸ್ತ್ಯಶ್ವರಥಪದಾತಿಬಲಂಬೆರಸು ಹಸ್ತಿನಾಪುರಕ್ಕೆ ಕಳಿಪಿ ಪಾಂಡವರಯ್ವರುಮನೊಡಂಗೊಂಡು ಸಕಲವನಚರಜಲಚರಕಂಜಕುಮುದೇಂದೀವರವಾಳಾನಿಳಯಮಪ್ಪ ನೀಳಾಚಳಕ್ಕೆ ಲೀಲಾಂಗಂ ಪೋದನನ್ನೆಗಮಿತ್ತ ಗಾಂಗೇಯನಱಿಪೆ ಕೌರವೇಶ್ವರನಿರ್ದೆಡೆಯನಶ್ವತ್ಥಾಮನಱಿದು—

²ಕೊರಲ ಕಱಿ³ ಶಿರದ ಪೆಱೆ³ ನೊಸ- ।
ಲುರಿಗಣ್ ಧೃತಚಾಪಹಸ್ತಶಾಕ್ವರಚಿಹ್ನಂ ॥
ವಿರಚಿಸೆ ಕೃಪಕೃತವರ್ಮರ್ ।
ಬೆರಸಾಗಳ್ ಮುಳಿದು ಬಂದನಶ್ವತ್ಥಾಮಂ² ॥ ೨ ॥

---

1 ಶ್ರೀಸದ್ವಂಶಂ ಕಮಲೋ- ।
ದ್ಭಾಸಿ ಸರೋಹಂಸನಗ್ರಜಾನುಜರೆಸೆಯಲ್ ॥
ಶ್ರೀಸತ್ಯಾಶ್ರಯನಖಿಳನಿ- ।
ವಾಸಂ ಸುಖವಿರ್ದನಲ್ತೆ ಸಾಹಸಭೀಮಂ1 ॥ —ಮ. ಪ್ರ. ಪಾ.

2 ಕೊರಲ ಕಱಿ³ ಶಿರದ ಪೆಱೆ³ ಮೆ- ।
ಯ್ಯರಿಪೆನ್ [ಮೇಣ್ಣೊ]ಪಲಕನ್ ಮನಂಗೊಳಲಾ ಶಾ- ॥
ಕ್ವರಚಿಹ್ನಂ ಕೃತವರ್ಮಂ ।
[ಬರೆ] ಕೃಪನೊಡನೆಯ್ದಿ ವಂದನಶ್ವತ್ಥಾಮಂ2 ॥ —ಮ. ಪ್ರ. ಪಾ.

॥ ಪೃಥ್ವೀವೃತ್ತಂ ॥

ಕನತ್ಕನಕಚಾಮರಂ ಧವಳಚಾಮರಂ ಕಯ್ಗಳೊಳ್ ।
ಮನಂ ಚಲಿಸೆ ಮಾಸಿ ತಾಳಿದ ಕುರುಳ್ಗಳುಂ ತನ್ನ ಬಿ- ॥
ನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂ- ।
ಡನಲ್ಲಿ ಕಮಳಾಕ್ಷಿಯಂ ನೃಪಭಲಕ್ಷಣಂ ಲಕ್ಷ್ಮಿಯಂ ॥ ೩ ॥

ಅಂತು ಕುಂಭಸಂಭವಸಂಭವಂ ಕಮಲನಾಭನ ಹೃದಯಭವನದ ಮೃತಾಬ್ಧಿಸಂಭವೆಯಂ ಕಂಡು— ನೀನಾರ್ಗೆ ಎತ್ತಣಿಂದಂ ಬಂದೆ ಎಲ್ಲಿಗೆ ಪೋದಪೆ ಎಂದು ಬೆಸಗೊಳೆ—

ಅಮೃತಪಯೋಧಿಮಂಥನದೆ ಪುಟ್ಟಿದೆನಬ್ಜಭವಾಂತರಾಳದೊಳ್ ।
ರಮಿಯಿಸಿ ಪದ್ಮನಾಭಸುರದೊಳ್ ನೆಲಸಿರ್ಪ ಮಹಾನುಭಾವೆಯಾಂ ॥
ಕಮಲೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದೆನೀಗಳು- ।
ತ್ತಮಪುರುಷೋತ್ತಮಂ ಬೆಸಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ
॥ ೪ ॥

ಎಂಬುದುಂ ದ್ರೋಣನಂದನಂ ನಾರಾಯಣಂ ಬೆಸಸೆ ಪೋದಪ ನೆಂದ ಲಕ್ಷ್ಮಿಯ ಮಾತನವಧಾರಿಸಿ ಮುಗುಳ್ನಗೆನಕ್ಕು—

ಚಳಮತಿಯಾದೆ ನೀಂ ಜಡಧಿಸಂಭವೆಯಪ್ಪುದಱಿಂ ಸರೋಜಸಂ- ।
ಕುಳರಜದಿಂದೆ ನೀಂ ಪೊರೆದು ರಾಜಸದೊಳ್ ನೆಲಸಿರ್ಪ ಗೋಪುಗಾ- ॥
ವಳವಱಿದಿರ್ದ ಕೃಷ್ಣನೊಡನಿರ್ದುದಱಿಂದಮೆ ಗೋವಿಯಾದೆಯು- ।
ಗ್ಗಳದ ವಿವೇಕಮಿಲ್ಲ ನಿನಗೆತ್ತಱಿವಾ ಪುರುಷಾಂತರಂಗಳಾ ॥ ೫ ॥

ಕಲಿ ಪಂದೆಯೆಂದು ಬಗೆಯದೆ ।
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ ॥
ಸಲೆ ವೃದ್ಧನೆಂದು ಬಗೆಯದೆ ।
ನೆಲಸುವೆ ನಿನ್ನಿಂ ನಿಕೃಷ್ಟರಿಂಬರುಮೊಳರೇ ॥ ೬ ॥

ಇಱಿಯಿಸುವೆ ತಂದೆಮಕ್ಕಳ- ।
ನಿಱಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ- ॥
ಬ್ಬಿಱಿಯಿಸುವಯ್ ಗುರುಶಿಷ್ಯರ- ।
ನಱಿಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ ॥ ೭ ॥

ಅದಲ್ಲದೆಯುಮಮೃತಸಮುದ್ರಮಂಥನದೊಳ್ ಪುಟ್ಟುವಂದು ಐರಾವತದೊಡನೆ ಪುಟ್ಟಿದುದಱಿಂ ವಿಪರೀತವೃತ್ತಿಯುಂ ಚಂದ್ರನೊಡನೆ ಪುಟ್ಟಿದುದಱಿಂ [1]ಕಳಂಕಸ್ವಭಾವಮುಂ[1] ಕೌಸ್ತುಭದೊಡನೆ ಪುಟ್ಟಿದುದಱಿಂ ಕಠಿನತ್ವಮುಂ ವಾಗ್ದೇವಿಯೊಡನೆ ಪುಟ್ಟಿದುದಱಿಂ ವಾಚಾಳತೆಯುಂ ಅಮರವೈರಿಯೊಡನೆ ಪುಟ್ಟಿದುದಱಿಂ [2]ಗ್ರಹಣಸಲ್ಲೀಲಾಬುದ್ಧಿಯುಂ[2] ವೈದ್ಯನೊಡನೆ ಪುಟ್ಟಿದುದಱಿಂ ವ್ರಣಶೂಲವೇದಿಯುಂ ನಾರದನೊಡನೆ ಪುಟ್ಟಿದುದಱಿಂ [3]ಕಲಹಸ್ವಭಾವಮುಂ[3] ಕಾಳಕೂಟದೊಡನೆ ಪುಟ್ಟಿದುದಱಿಂ ಕೊಲೆಯುಂ ಕಳ್ಳೊಡನೆ ಪುಟ್ಟಿದುದಱಿಂ ಸೊಕ್ಕುಂ [4]ಅಚ್ಚರಸಿಯರೊಡನೆ ಪುಟ್ಟಿದುದಱಿಂ ಪಾಱುಗೆಯ್ತಮುಂ[4] ನಿನಗೆ ಸಹಜ[5]ಮಾಗಿರ್ದುವು[5] —

ಪೊಡೆವಡೆ ಪರಸದೆ ಬಿನ್ನವಿ- ।
ಪೊಡೆ ಕೇಳದೆ ಮುಂದೆ ನಿಂದರಂ ಕಾಣದೆ ತ- ॥
ಕ್ಕಡೆಯೊಳ್ [6]ಕಡೆಗಣಿಸುವ ನೃಪ[6] ।
ವಿಡಂಬ[7]ಮಿಪ್ಪು[7] ಲಕ್ಷ್ಮಿ ನಿನ್ನ ದೂಸಱಿನತ್ತೀ ॥ ೮ ॥

---

1 [ಕೌಟಿಲ್ಯ]ಮುಂ1–ಮು. ಪು. ಪಾ.
2 ಗ್ರಹಣಲಕ್ಷಣಬುದ್ಧಿಯುಂ2–ಮ. ಪ್ರ. ಪಾ.
3 ಪಿಸುಣತ್ವಮುಂ3– ,, ,,
4 ಮತ್ಸ್ಯದೊಡನೆ ಪುಟ್ಟಿದುದಱಿಂ ಚಲನಮುಂ4–ಮ. ಪ್ರ ಪಾ.
5 ಮತ್ತೆ5– ಮ. ಪ್ರ. ಪಾ.
6 ತಕ್ಕುದನೀಯದ6– ,,
7 ಮದು7– ,,

† ಗುಣಿಗಳ ನೆಱೆ ಪೊರ್ದದೆ ನಿ- ।
ರ್ಗುಣರಂ ಪೊರ್ದುವೆ ವಿಶಿಷ್ಟರಂ ದುಷ್ಟರೊಳಂ ॥
ಗಣಿಯಿಸಿ ಸಮನೆಂಬವಗುಣ ।
ಗಣಂಗಳಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ ॥ ೯ ॥

ಮಲಿನರನೆ ಪೊರ್ದುವಯ್ ನಿ- ।
ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್ ॥
ಜಲವಿರ್ಪ ದೆಸೆಯೊಳಿರ್ದಾ ।
ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇೞ್ಗಂ ॥ ೧೦ ॥

ಧವಳಾತಪತ್ರಮುಡ್ಡಂ ।
ದಿವಸಕೆ ಸಲಲೀಯದಂತಿರಿರ್ಪುದು ವಿಚಳ- ॥
ದ್ಧವಳಿಮಚಮರರುಹಂ ಬೀ- ।
ಸುವ ನೆವದಿಂ ಪಾಱೆ ಬೀಸುವುದು ನೃಪಗುಣಮಂ ॥ ೧೧ ॥

ಜಳಬುದ್ಬುದಂಗಳತಿಸಂ- ।
ಚಳವಿದ್ಯುದ್ವಿಲಸಿತಂಗಳಚಿರತೆಯಂ ಮುಂ- ॥
ತಿಳಿಪಿದುವೊ ನಿನಗೆ ನಿನ್ನಿಂ ।
ತಿಳಿದುವೊ ಮೇಣಿವರೊಳಱಿಪುಗುಂ ಕೂರ್ಪವರೊಳ್ ॥೧೨॥†

ಎಂದು ಲಕ್ಷ್ಮಿಯುಂ ವಿಡಂಬನಂಗೆಯ್ದುನಿತಱೊಳಂ ಮಾಣದೆ—

ಪೋ ಮಾಣ ಧರ್ಮಜಂ ಗಡ ।
ಭೀಮಂ ಗಡ [1]ಫಲ್ಗುಣಂ ಗಡಮುಳ್ಳೆಳ್ ಗಡ[1]* ಸಂ- ॥
ಗ್ರಾಮದೊಳವಂದಿರಶ್ವ- ।
ತ್ಥಾಮಂಗಾಪ್ತೋಶನಂಗೊಳಲ್ ನೆಱೆದಪರೇ ॥ ೧೩ ॥

† ಕಂದ ಪದ್ಯಗಳು ೯, ೧೦, ೧೧, ೧೨ ಇವು ಮದ್ರಾಸು ಪ್ರತಿಯಲ್ಲಿ ಇಲ್ಲ.
1 ಮರ್ಜುನಂ ಗಡ ಯಮಳರ್ ಗಡ1—ಮ. ಪ್ರ ಪಾ.

ನಿನ್ನ ಮುರವೈರಿಯುಳವುಮು- ।
ನೆನ್ನಳವುಮನೆಲಗೆ [1]ಕಾಣ್ಬೆ ಕುರುಪತಿಯಿಂದಂ ॥
ಮುನ್ನಂ ತ್ವತ್ಪತಿಯಿಂದಂ[1] ।
ನಿನ್ನನಗಲ್ಚಲ್ಕೆ ಕಪಟಗೋಪಂ ಪ್ರಭುವೇ ॥ ೧೪ ॥

ಕುರುರಾಜಂ ರಾಜರಾಜಂ ಸಕಲವಸುಮತೀಕಾಂತನಿರ್ದಂತೆ ಯುದ್ಧಾ- ।
[ತುರನಿನ್ನೀ] ಸಾಹಸಾಂಕಂ ಕುರುಕುಳಪತಿಯಿರ್ದಂತೆ ಮೆಯ್ಬಿಟ್ಟು ದಾಮೋ-
ದರನೆಂದೀ ಕಜ್ಜದೊಳ್ ನೀಂ ತೊಡರ್ದು* ಮರುಳೆ ಬೆಂಡಾಗದಿರ್ ಪೋಗು ನೀಂ ಚೆ- ।
ಚ್ಚರಮತ್ತಿನ್ನೆತ್ತ ಪೋಪಾ ಪರಿಭವಿಸಿದಪೆಂ ನಿನ್ನನಿಂ ಕಾವನಾವೋಂ ॥ ೧೫ ॥

ಎಂದಶ್ವತ್ಥಾಮನುದ್ದಾಮಕೋಪಾಟೋಪಬದ್ಧಭ್ರುಕುಟಿಯುಂ ತರಳ ತಾಮ್ರಲೋಚನನುಮಾಗೆ—

ಅತ್ತಲಸುರಾರಿ ಬೆಸಸಿದ- ।
ನಿತ್ತಲ್ ರುದ್ರಾವತಾರನೆೞೆದೊಯ್ದಪನಿಂ- ॥
[ತ]ತ್ತ ಪುಲಿಯಿತ್ತ ದರಿಯೆಂ- ।
ದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ ॥ ೧೬ ॥

ಅಂತು ತಳವೆಳಗಾದ ಲಕ್ಷ್ಮೀಕಾಂತೆಯು ಚಳದಳಿಕುಳವಿನೀಳ ಕುಟಿಲಕುಂತಲಂಗಳಂ ತಳವಾಱೆ ತೆಗೆದು ಕುರುಕುಲಕುಟುಂಬನ ಘಟಚೇಟಿಯಂ ಕೊಂಡುಪೋಪಂತೆ ಮಗುೞೆ ಕೊಂಡುಪೋಗಿ ಭೀಮ ಸೇನನ ಗದಾಘಾತದೊಳೂರುಭಂಗಮುಂ ಪದಾಘಾತದೊಳ್ ಮಕುಟ ಭಂಗಮುಮಾಗೆ [2]ಸುರಳ್ದು ತೆರಳ್ದು[2] ಸುಯೋಧನನಿರೆ—

ನೆತ್ತಿಯ ಮಿದುಳೊಡೆದುಣ್ಮುವ ।
ನೆತ್ತರ ಧಾರೆಗಳೆ ತೀವೆ ತನ್ನಯ ಮುಖದೊಳ್ ॥

1 [ನಿನಗೆ] ನೀನೇ ಕಾಣ್ಬಾ ॥ ಮುನ್ನಂ ಮತ್ಪತಿಯಿಂದಂ1—ಮು. ಪ್ರ. ಪಾ.
2 ಸುರುಳ್ದುರುಳ್ದು ಪುಡಿಯೊಳ್ ಪೊರಳ್ದು2—ಮು. ಪ್ರ. ಪಾ.

ನೆತ್ತರನೆ ಕಾಱಿ ಕುರುಪತಿ ।
ನೆತ್ತರ ಕಡಲೊಳಗೆ ತೇಂಕಿ [1]ಮುೞುಗುತ್ತಿರ್ದಂ[1] ॥ ೧೭ ॥

ಕುಂತೀಸುತಭೀಮಗದಾ- ।
ಭ್ರಾಂತಂ ಜಂಘಾನ್ಯಪೇತನುಣ್ಮುವ ರಕ್ತಾ- ॥
ತ್ಯಂತಪ್ರವಾಹಸಹಿತಂ ।
[2]ಶ್ರಾಂತಂ ರಾಗಿ[2]ಯವ್ರೊಲಿರ್ದನಾ ಕುರುರಾಜಂ ॥ ೧೮ ॥

ಕುರುರಾಜಂ ತೊಡೆವೇನೆಗೆ ।
ನರಳನೆ ಕುಱುವಾದ ತೊಡೆಯ ಬೇನೆಗೆ [3]ಕಂಡರ್ ॥
ನರ*ಳ್ವಂತೆ ನರಳದರಸಂ[3] ।
ವಿರೋಧಿಯಿಂದಾದ ಮಾನಹಾನಿಗೆ ನೊಂದಂ ॥ ೧೯ ॥

ಅಂತೆನಿಸಿದ ಕುರುರಾಜನಂದನನಂ ಗುರುನಂದನಂ ನೋಡಿ—

ಕುಳಿಕನ ಪಲ್ಗಳಂ ಮುಱಿಯೆ ಮೋದಿದರಾರ್ ಕುಡುಪಿಂದೆ ಸಿಂಹಮಂ ।
ಮುಳಿಯಿಸಿ[4]ದಾಡೆಯಂ[4] ಪಿಡಿದು ಕಿೞ್ತವರಾರ್ ಮದಹಸ್ತಿಯಂ ಭಯಂ-
ಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೊತ್ತಿದರಾರ್ ಸುರಾದ್ರಿಸಿ- ।
ಶ್ಚಳನಿಬಿಡೋರುಮಂಡಲಮನಾರುಡಿದರ್ ಫಣಿರಾಜಕೇತನಾ ॥ ೨೦ ॥

[5]ಎಂದಾಯಸಂಬಟ್ಟು ಕಾಲ ಮೇಲೆ ಕವಿದು ಬಿೞ್ದು[5]—

---

1 ತೆರೆ ಮುೞುಗಿರ್ದಂ1—ಮು. ಪ್ರ. ಪಾ.
2 ಶಾಂತಂ ಯೋಗಿ2—ಮು. ಪ್ರ. ಪಾ.
3 ಗಂಡರ್ ನರಳಲ್ ತಕ್ಕುದೆ ನರಳಂ3 ಮು. ಪ್ರ. ಪಾ.
4 ಪಲ್ಗಳಂ4— ಮು. ಪ್ರ. ಪಾ.
5 ಎಂದು ಸೇದೆವಟ್ಟು ಬಾಯುಂ ಬಿಟ್ಟು ಕಾ [ಪಱಿದು]......ವಟ್ಟು5— ಮು. ಪ್ರ. ಪಾ

[1] ಹಾ ಕುರುಕುಲಚೂಡಾಮಣಿ ।
ಹಾ ಕೌರವಚಕ್ರವರ್ತಿ ಹಾ ಸಕಲಧರಿ- ॥
ತ್ರೀಕಾಂತ ನಿನ್ನುಮಂ ಪರ- ।
ಲೋಕಕ್ಕಟ್ಟಿದನೆ ಕಾಯಗೊಯ್ದು ವಿಧಾತ್ರಂ[1] ॥ ೨೧ ॥

ಹಾ ಕುರುವಂಶಮಹಾಕಮ- ।
ಲಾಕರಕಲಹಂಸ ಹಾ ಸಮುದ್ರಾಂತಧರಿ- ॥
ತ್ರೀಕಾಂತ ಹಾ ಫಣೀಂದ್ರಪ- ।
ತಾಕಾ ವಿಧಿವಶದೆ ನಿನಗಮೀ ಪರಿಯಾಯ್ತೇ ॥ ೨೨ ॥

ಎಂದು ಗುರುನಂದನಂ ವಿಪ್ರಳಾಪಂಗೆಯ್ದು ತನ್ನ ಮೇಲುದಱ ಸೆಱಂಗಿಂದಾತನ ತಲೆಯ ಮೇಲೆ ಕೆದಱಿರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು—

ಸ್ಥಿರಮೂಲಪತ್ರಶತಕರ ।
ಕರಶಾಖಂ ದ್ವಿಜವಿಲಾಸ ಸುಖದಂ ಕುರುಭೂ- ॥
ವರನೆಂದೆಸೆದಿರ್ದ ಮಹಾ- ।
ತರು ಕಡೆದುದು ಭೀಮಗಜದ ಚರಣಾಹತಿಯಿಂ ॥ ೨೩ ॥

ಎಂದು ನುಡಿದು ಮನದೊಳ್ ಕಟ್ಟುಕಡೆದು—

---

1 ಮುದ್ರಿತ ಪುಸ್ತಕದ ಪಾಠಾಂತರವು (ಮಾತ್ರಾಸಮಕಷಟ್ಪದಿಯೆಂಬ ಹೆಸರಿನಿಂದ) ಈ ಕೆಳಗೆ ಕೊಟ್ಟಂತಿದೆ—

ಹಾ! ಕುರುಕುಲಮೂಲಸ್ತಂಭಾ ।
ಹಾ! ಕುರು [ನೃಪ] ಕುಲ ಮೃಗರಾಜಾ ।
ಹಾ! ಕುರುನೃಪವತ್ಸಾ [ಹಾ! ಸು] ಹೃದ್ವ್ಯಸನಭಂಜನಾ ॥
ಹಾ! ಕುಂಭ[ಕ] ಸಂಭವಶಿಷ್ಯಾ ।
ಹಾ! ಕೃಪಮುಕುಟಾನತಚರಣಾ ।
ಹಾ! [ಕುಲನೃಪಪೂಜಿತಧೃತಮುಕುಟ] ಪನ್ನಗಕೇತೂ ॥ 1

ಎನ್ನಂ ವಂಚಿಸಿ ಬಂದುದ- ।
ಱಿನ್ನಿನಗಿನಿತಾಯ್ತುವಸ್ಥೆ [1]ಕುರು[ರಾಜಾ] ಸೀ- ॥
ನಿನ್ನಂ[1] ಪತಿಕಾರ್ಯಮನಱಿ- ।
[2][ತೆನ್ನಂ][2] ನೋಡೆನ್ನ ಶಕ್ತಿಯುಂ [3]ಭಕ್ತಿಯುಮಂ[3] ॥ ೨೪ ॥

ಎಂದು ನುಡಿದ ಭಾರದ್ವಾಜತನೂಜನ ನುಡಿಗೆ ರಾಜರಾಜನವಧಾರಿಸಿ-

[4] ಹತದೈವಂ ಪ್ರಾರಂಭಂ ।
ಪ್ರತಿಕಾರಂ ದೀರ್ಘಸೂತ್ರತಪ್ರತಿಕಾರಂ ॥
ಶತಮಾದೊಡಂತು ಮೋಕ್ಷಂ ।
ಹತೋರುಗೆನಗಾವುದಿಂ ಗಡ ಪ್ರತಿಕಾರಂ[4] ॥ ೨೫ ॥

ಎಂದು ಪರಮ[5]ನಿರ್ವೇದಪರಾಯಣನಾಗಿ [5]ನುಡಿದು—

ಹತದೇಹಹತಭುಜದ್ವಯ ।
ಹತೋರುಹತಜೀವಹತಕಿರೀಟಂ ಹತಹೃ- ॥
ತ್ಪ್ರತಿಕಾರಮೆಂಬುದುಂಟೇ ।
ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ ॥ ೨೬ ॥

ಅರಿಚರಣಪಾಂಸು ಪತ್ತಿರೆ ।
ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ ॥

---

1 ಕುರುಪತಿಯುನಿತಂ ನಿನ್ನಿಂ1—ಮು. ಪು. ಪಾ.

2 ದಿನ್ನುಂ2—ಮು. ಪು. ಪಾ.

3 ಕುರುರಾಜಾ3—ಮು. ಪ್ರ. ಪಾ.

4 ಹತದೇಹಪ್ರಾರಂಭದೆ ।
ಹತಕಾರ್ಯಂ ದೀರ್ಘಹೃತ್ಕರಂ ಪ್ರತಿಕಾರಂ ॥
ಪ್ರತಿವಸ್ತುಮೋಕ್ಷಮುಕ್ಕುಂ ।
ಹತೋರುವಾದೆನಗೆ ನೂಱ್ಪಿದೇಂ ಪ್ರತಿಕಾರಂ 4 ॥—ಮು. ಪು. ಪಾ.

5 ನಿರ್ವೇಗಪರಾಯಣನಾಗೆ5—ಮು. ಪ್ರ. ಪಾ.

ಗುರುನಂದನ ನೀನೆನ್ನೀ ।
ಪರಿಭವಪಾಂಸುವನದೆಂತು ಪೇೞ್ ಕಳೆದಪೆಯೋ । ೨೭ ॥

ಎಂದು ನುಡಿದ ಸುಯೋಧನಂಗೆ—

ಹರಿಯ ಬಲ್ಲದಿಂದೆ ಪಾಂಡವ- ।
ರರಿಯರ್ ಗೆಲಲೀಶ್ವರಾಂಗನಶ್ವತ್ಥಾಮಂ ॥
ಪರಬಲನಜೇಯನೆಂದಂ- ।
ತರಮುಂ ನೃಪನಂತರಂಗದೊಳ್ ಚಿಂತಿಸಿದಂ ॥ ೨೮ ॥

ಎಂದು ಚಿಂತಿಸಿ—

ಇದುವಂ ನೋಡುವೆನಿನ್ನುಮೆನ್ನೊಡಲೊಳೆನ್ನೀ ಪ್ರಾಣಮುಳ್ಳನ್ನಮೋ- ।
ವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದೆನ್ನ ಮುಂದಿಕ್ಕು ಕೂ- ॥
ರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾಱೆ ಕಂಡೆನ್ನ ಚಿ- ।
ತ್ತದೊಳೊಂದುಂ ತೊದಳಿಲ್ಲದೆನ್ನಸುಗಣಕ್ಕುತ್ಕ್ರಾಂತಿಯಂ ಮಾಡುವೆಂ ॥ ೨೯ ॥

ಎಂಬುದುಮದಾವ ಗಹನಮಂತೆಗೆಯ್ವೆನೆಂದು ಪೂಣ್ದು ಮಹೀಕಾಂತೆಯುಮಂ ಶ್ರೀಕಾಂತೆಯುಮಂ ಕಣ್ಗಿಡೆ ಜಡಿಯೆ—

ಉರಗೇಂದ್ರಫಣಾಮಣಿ ನೂ- ।
ಪುರಮಣಿ ಜಲರಾಶಿ ರತ್ನಮೇಖಲೆಯೆನಿಪಾ ॥
ಕುರುಧರೆ ನಿಜರೂಪದೆ ಬಂ- ।
ದಿರದಾ ಗುರುಸೂನುಗಱ್ಕೆ ಬೇಸನೇನೆಂದಳ್ ॥ ೩೦ ॥

ಒರ್ವಳ್ ಕೊಡೆವಿಡಿವುದು ಮ- ।
ತ್ತೊರ್ವಳ್ ಚಾಮರಮನಿಕ್ಕುತಿರ್ಪುದು ಕುರುವಂ- ॥
ಶೋರ್ವೀಪತಿಗಾಂ ಬರ್ಪಿನ- ।
ಮಿರ್ವರುಮಿಂತಿರ್ಪುದೆಂದನಶ್ವತ್ಥಾಮಂ ॥ ೩೧ ॥

ಅಂತಿರ್ವರಂ ನಿಯೋಜಿಸಿ ನೇಸಱ್ ಪಡುವಿನಪಿಂದರ್ ಸಿಜಪತಿಯುಂ ಬೀೞ್ಕೊಂಡು ಪಯಣಂಬೋಗಿ ಹಸ್ತಿನಾಪುರಮಂ ಪೊಕ್ಕು ಅಲ್ಲಿ—

ಕಂಜವನದಂತೆ ಲಕ್ಷ್ಮೀ— ।
ರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕ ॥
ವ್ಯಂಜಿತಮುಮಪ್ಪ ಬೀಡಂ ।
ಮಂಜಿಱಿವಂತಿರುಳೊಳಿಱಿದನಶ್ವತ್ಥಾಮಂ ॥ ೩೧ ॥

ಅಂತಿಱಿವಾಗಳ್ ಕೆಲವುದಿವಸಂ ಕಾದಿ ಪಿರಿದುಂ ಪಯಣಂಬಂದು ಬೞಲ್ದು ಕೋರೈಸಿ ನಿದ್ರೆಗೆಯ್ದವರ್ ತ್ರೊಟ್ಟನೆ ನಿದ್ರೆಯಿಂದೆೞ್ಚತ್ತು ಮುಟ್ಟಿವಂದಾಗಳಾ ಕಳಕಳಮಂ ಕೇಳ್ದು ಕರತಳದಿ ಕಣ್ಣಂ ಪೊಸೆಯುತ್ತುಮೆೞ್ದು ತಂತಮ್ಮ ತಲೆದೆಸೆಯೊಳಿರ್ದ ಕರವಾಳಂ ಕೊಂಡು ನಿಂದ ನೆಲೆಯೊಳ್ ತಳರದಿರ್ದ ತಲೆಗಾಪಿನಾಳುಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘರವಟ್ಟಿಗೆಯಾಳ ಮೇಲಿಕ್ಕಿ ಘರವಟ್ಟಿಗೆಯಾಗೆ ಮಾಮುಸಕಂಮುಸಗಿ ಜವಂ ನೇಱಿ ಬರ್ಚಿದಂತೆ ಪೆಂಡಿರ್ ಮಕ್ಕಳೆನ್ನದೆ ನಿವಳಿವಟ್ಟುಮಪ್ಪಿನಮೊಂದಕ್ಷೋಹಿಣೀಬಲಮೆಲ್ಲಮಂ ಪೇೞಿಪೆಸರಿಲ್ಲಮೆಂಬಂತೆ ಕೊಂದು ತನಗೆ ಕಟ್ಟಿದಿರೊಳಿರ್ದ ಧೃಷ್ಟದ್ಯುಮ್ನನುಮಂ ಮುಟ್ಟೆ ಮೊದಲಿಸಿ ತಮ್ಮಯ್ಯನಂ ಪರಿಭವಿಸಿದ ಪಗೆಯಂ ಕೊಂದು ದೆಸೆವಲಿಗೆಯ್ದು ಶಿಖಂಡಿಚೇಕಿತಾನಯುಧಾಮನ್ಯೂತ್ತಮೌಜಸಪ್ರಭೃತಿಗಳುಮನಿಕ್ಕಿ ಪಾಂಡವರ ಶಂಕೆಯಿಂ ಶ್ರುತಸೋಮಕಪ್ರಭೃತಿಗಳಪ್ಪ ಪಂಚಪಾಂಡವರ ತಲೆಗಳಂ ಕೊಂಡು ತೞತೞನೆ ನೇಸಱ್ ಮೂಡುವಾಗಳ್ ಬಂದು — ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ—

ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟವಿಂದರ್ ನೋ— ।
ಡುವುದೆ ಮದೀಯವಕ್ತ್ರಮನೆ ಕೆಮ್ಮನೆ ಪೋಯ್ತುಱಿವಿಲ್ಲದಾಯ್ತು ಪಾಂ— ॥
ಡವರ ಶಿರಂಗಳಲ್ಲವಿವು ಪಾಂಡವಸೂನುಗಳಪ್ಪ ಪಂಚಪಾಂ— ।
ಡವರ ಶಿರಂಗಳಂ [1]ನೆಱೆ ವಿಚಾರಿಸದ[1]ಕ್ಕಟ ಕೊಂಡುಬರ್ಪರೇ॥ ೩೨ ॥

1 ಶಿಶುಶಿರಂಗಳನ 1 — ಮ. ಪ್ರ. ಪಾ.

ಪರಮೇಶ್ವರಾವತಾರನೆ ।
ಪರಮಜ್ಞಾನಿಯೆ ವಿವೇಕವಿಕಳರವೊಲ್ ಬಾ- ॥
ಳರ [1]ತಲೆಯಂ ತಂದುದಱಿಂ[1] ।
ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ ॥ ೩೬ ॥

ಅದುಕಾರಣಂ [ನೀಂ] ಪ್ರಾಯಶ್ಚಿತ್ತಪವಿತ್ರಗಾತ್ರನಾಗಿ ಹಿಮವಂತಕ್ಕೆ ಪೋಪುದೆಂದು [ಸುಯೋಧನನ ನುಡಿದ ನುಡಿಯನವಧಾರಿಸಿ ರುದ್ರಾವತಾರಂ ಕರಂ ಸಿಗ್ಗಾಗಿ ಪಶ್ಚಾತ್ತಾಪಂಬಟ್ಟು ಪ್ರದೇಶದಿಂ ತಳರ್ದು ಹಸ್ತಿನಾಪುರದ ಪುರವೀಥಿಗಳೊಳಗನೆ ಬರುತ್ತುಮಿಂದಿನ ಯುದ್ಧಾವಸಾನದೊಳಾದ ಕಳಕಳದಿಂ ಕಳಕುಳವಾದ ಪುರಜನಂಗಳ ನೆರವಿಯೊಳಗೋರೊಂದೆಡೆಯೊಳ್ ಪವಳದ] §ಮುತ್ತಿನ ಮಾಣಿಕದ ಪೇಳಿಗೆಗಳಂ ಪೊತ್ತು ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ [ಪಜ್ಜ ಪಸಿ]ಯೆಗ್ಗರುಮಂ ಕುಬ್ಜವಾಮನಬಧಿರಜನಂಗಳ್ವೆರಸು ತಮ್ಮಂ ತೆಗೆವರ ಕಯ್ಯಂ ಪತ್ತಿ ಬರ್ಪ [ಗಾವಿಲರುಮಂ ಪುರಜನಂಗಳ್ವೆರಸು ಪುರವೀಥಿಗಳಂ ಸುತ್ತಿಯುಂ] ಬಳಸಿಯುಂ ಬರ್ಪ ವೃದ್ಧಕಂಚುಕಿಗಳುಮಂ ಪೊಟ್ಟೆ ಬಟ್ಟಾಗಿರ್ದ ಪೆಱನಟ್ಟೆ ನಡುವಂ ನೋಡಿ ಪೊಕ್ಕು ಬಿಟ್ಟಂಬು ಬಿಡುಕಲಱ್ಪದ [ಕಟ್ಟಚ್ಚರಿಗೊಳ್ವ ಘರವಟ್ಟೆ]ಗೆಯ ಕಾಪಿನಾಳ್ಗಳುಮಂ ಕಜ್ಜಮಂ ಕಾಲಮುಮಂ ಪಾರ್ವ **ಕಜ್ಜಗಲಿಗಳುಮಂ** ಮಾರ್ಗಮೊಱೆದ ಜವರದ **ಲೋಭಿಗಲಿಗಳುಮಂ** ನೊಂದು ಪಲ್ಗಿಱಿದೋಡುವ **ಪುಲ್ಗಲಿಗಳುಮಂ** ಮೋಡಿ ಮುಯ್ಯೊಳ್ ಸಿಂದಿಱಿವ **ಅರಿಗಲಿಗಳುಮಂ** ಸೆಂಗಂ ಬೆಱಗಂ ಬಗೆಯದ **ನಿಚ್ಚಟಗಲಿಗಳುಮಂ** ಎತ್ತಾನುಮಿ[ರ್ದ ಬಿಱಿವು]ದೋಡಿಱಿವ **ಧುರಗಲಿಗಳುಮಂ** ಆಳ್ದನ ಬೆಸನಂ ಮಱೆಕೇಳದ **ಬೆಸಗಲಿಗಳುಮಂ** ಉಬ್ಬಾಳಿಯುಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ **ಪಡಿಗಲಿಗಳುಮಂ** ಅಳವನಱಿದು ಜೇಗಿಱಿವ **ಬಲ್ಗಲಿಗಳುಮಂ**

1 ತಲೆಯನರಿದು ತಂದೆಯೊ 1 - ಮು. ಪು. ಪಾ.

§ ಮುತ್ತಿನ..... ಪ್ರವರ್ತನಾರ್ಥಂ§ ಈ ಗದ್ಯಭಾಗವು ಮದ್ರಾಸು ಪ್ರತಿಯಲ್ಲಿ ಇಲ್ಲ; ಮೈಸೂರು ಪ್ರತಿಗಳಲ್ಲಿ ಮತ್ತು ಮುದ್ರಿತ ಪುಸ್ತಕದಲ್ಲಿ ಮಾತ್ರ ಇದೆ; ಕೆಲವೆಡೆ ಗ್ರಂಥಪಾತವೂ ಇದೆ. [illegible]ಲ್ಗೆ "ಅದುಕಾರಣಂ" ಎಂದು ಆರಂಭಿಸಿ "ಪ್ರಾಣವಿಸರ್ಜನೋ

ಮಾರ್ಬಲಮಂ ಕಂಡು ಪೂಣಿಸಿಜೀವ **ಕಡುಗಲಿಗಳುಮಂ** ಬೇಡಿದಗೆ
ಬೇಡಿತಂಕೊಟ್ಟು ಬಂದಿಜೀವ **ಕಸವರಗಲಿಗಳುಮಂ** ಮತ್ತಮಗ್ಗೆ ನಡೆ
ಜೀವ **ನಡೆಗಲಿಗಳುಮಂ** ನೋಡಿ [ವಿಸ್ಮಯಂಬಟ್ಟು] ರೌದ್ರಪ್ರಾಯಶ್ಚಿ
ಪ್ರವರ್ತನಾರ್ಥಂ§ ಹಿಮವತ್ಪರ್ವತಕ್ಕೆ ಪೋಪುದುಂ [ಸುಯೋಧನ
ಚಿತ್ತಸಮಾಧಾನಂಗೆಯ್ದು [1]ಚಿತ್ರ[ಜ]ಬಾಂಧವನಂ[1] ಸ್ಮರಿಯಿಸಿ ಪರಲೋ
ಕಮುಂ ಸಾಧಿಸುವೆನೆಂದು [2][ಕೃತವರ್ಮಾದಿಗಳಂ ಪರಿಜನಂಗಳುಮಂ]
ವಿಸರ್ಜಿಸಿ [3]ತದ್ದಿವಸಾವಸಾನಸಮಯದೊಳ್[3] ಪ್ರಾಣವಿಸರ್ಜನೋನ್ಮು
ನಾದನಿಂತು—

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ- ।
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ದು ಚ- ॥
ಕ್ರಾಂಕಮುಗಲ್ವಿನಂ ಕ್ರಮದಿನಂಬರಮಂ ಬಿಸುಟು[4]ರ್ವಿಗಂ[4]ಧಕಾ- ।
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ॥೩೫

ಮೊದಲೊಳ್ [5]ಶಂತನು[5]ಸೂನು ಪತ್ತುದಿವಸಂ ಚಾಪಾಗಮಾಚಾರ್ಯನ
ಯ್ದುದಿನಂ ಭಾಸ್ಕರನಂದನಂ ದಿನಯುಗಂ ಶಲ್ಯಂ [6]ಭರಂಗೆಯ್ದು ಕಾ-
ದಿ [ದೊಡಾದರ್ಧದಿನಂ ದಿನಾರ್ಧದ][6] **ಗದಾಯುದ್ಧಂ** ಪರಿಚ್ಛಿನ್ನಮಿಂ-
ತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾವಹಂ **ಭಾರತಂ**
॥ ೩೬

ಕದನಂ ಮಾರ್ಗಶಿರದ ಶು- ।
ದ್ಧದಿನಂ [7]ತೇರಸಿ[ಯ ತಾರೆ][7] ಭರಣಿಯೊಳಾಮು ॥

ನ್ಮುಖನಾದನಿಂತು" ಎಂದು ಮುಗಿವ ಪೂರ್ಣಗದ್ಯಭಾಗದಲ್ಲಿ ಗ್ರಂಥಪಾತವಿರುವೆ
ಯಲ್ಲಿ ಕಂಸಗಳೊಳಗೆ ಕೊಟ್ಟಿರುವ ಪಾಠವನ್ನು ಸಂಪಾದಕರು ಊಹಿಸಿ ಕೂಡಿಸಿದುದು
1 ಉಚಿತಮಂ1 ಮು. ಪ್ರ. ಪಾ. 1 ಅಜಿತನಂ1 ಮೈ. ಪ್ರ. ಪಾ.
2 ಅಶ್ವತ್ಥಾಮಾದಿಗಳಂ2—ಮು. ಪ್ರ. ಪಾ.
3 ಕಾರ್ಯಾವಸಾನದೊಳ್3—ಮು. ಪ್ರ. ಪಾ.
4 ರ್ಬಿನಂ4—ಮು. ಪ್ರ. ಪಾ.
5 ಶಾಂತನ5—ಮು. ಪ್ರ. ಪಾ.
6 ಭರಂಗೆಯೊ ಡಾ|ದದಿನಾರ್ಧಂ ದಿನವರ್ಧದಂದಿನ|6 ಮು. ಪ್ರ. ಪಾ.
7 ತೇರಸಿ ತಾರಗೆ7—ಮು. ಪ್ರ. ಪಾ.

ಲದ ಕಡೆಯುಮವಾಸೆಯ [1]ಪ- ।
ರ್ವ[1]ದೊಳಂ ನಿರ್ಮೂಲವಾಯ್ತು ಕೌರವವಂಶಂ ॥ ೩೭ ॥

ಅಂತು ಭಾರತಂ ಸಮರಭಾರಾವತಾರವಾಗೆ—

ಜಯಲಕ್ಷ್ಮೀ[2]ಪ್ರಿಯನೊ[2]ಳ್ ಪರಾಕ್ರಮಕೃತಾಲಂಕಾರನೊಳ್ ಸತ್ಯವಾ-।
ಡಿಯೊಳರ್ಥಿಪ್ರಿಯನೊಳ್ ಧರಾಪ್ರಣಯಿಯೊಳ್ ಸದ್ವೀರಶಿಯೊಳ್ **ಪಂಡಿತಾ-** ॥
**ಶ್ರಯನೊಳ್** ರಾಜಿತರಾಜಚಿಹ್ನ[3][ಯುತನೊಳ್][3] ಶ್ರೀದೇವಿಯುಂ ಭೂವಿದೇ-।
ವಿಯುಮುತ್ಕೃತ್ಸವದಿಂದೆ ಬಂದು ನೆರೆದರ್ **ಚಾಳುಕ್ಯಕಂದರ್ಪನೊಳ್** ॥ ೩೮ ॥

ಧರಣೀಕಾಂತೆ [ಸುಪರ್ವ ಟಂ] ಪರಸೆಯುಂ ಶ್ರೀಕಾಂತೆ [4]ಸೇಸಿಕ್ಕೆಯುಂ[4]
ಪರಮಾನಂದದೆ [5]ಸೇಸೆಯುಂ ಪರಕೆಯುಂ[5] ತಾನಾಂತುಕೊಂಡಾಗಳಾ- ॥
ದರದಿಂ ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯಂ ತಾಳ್ದಿ ಮೂ- ।
ವ[6][ರಸಾ][6]ಕಾಂತೆಯುರಂ ಮನಂಗೊಳಿಸಿದಂ **ಚಾಳುಕ್ಯಕಂಠೀರವಂ** ॥ ೩೯ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ **ಶ್ರೀಸಾಹಸಭೀಮವಿಜಯದೊಳ್ [7]ದುರ್ಯೋಧನೋತ್ಕ್ರಾಂತಿವರ್ಣನಂ[7]** ನವಮಾಶ್ವಾಸಂ ಸಂಪೂರ್ಣಂ ॥



1 ದಿವಸ1—ಮು. ಪು. ಪಾ.
2 ಪತಿಯೊ2— ,, ,,
3 [ಸಹಿತಂ]3—ಮು. ಪ್ರ. ಪಾ.
4 ಯುಂ ಬಂದು ತಾಂ4—ಮು. ಪು. ಪಾ.
5 ಸೇಸೆಯಿಂ ಪರಸೆಯುಂ5— ,, ,,
6 ರುಮಾ—6 ,, ,,
7 ಕೌರವವಂಶನಿರ್ಮೂಲನಂ7—ಮು. ಪ್ರ. ಪಾ.

## ॥ ದಶಮಾಶ್ವಾಸಂ ॥

ಶ್ರೀಗೆ [1]ವಚಶ್ರೀಗೆ ಜಯ[1] ।
ಶ್ರೀಗೆ ಮನೋರಮಣನೆನಿಸಿ ಸಕಲಧರಿತ್ರೀ ॥
[2]ಭಾಗದೊಳಂ ನೆಗೞ್ದಂ ದಿ[2]— ।
ಗ್ಭಾಗದೊಳೆಸೆಯಲ್ಕೆ ಕೀರ್ತಿ **ಸಾಹಸಭೀಮಂ** ॥ ೧ ॥

ಆಗಳ್ ಸಮರವಿಜಯಿಯಪ್ಪ ಮುರಾಂತಕಂ ಸಾಹಸಭೀಮನ ಸಾಹಸಕ್ಕೆ ಮೆಚ್ಚಿ ಧರ್ಮನಂದನನ ಮೊಗಮಂ ನೋಡಿ—

[3]ಕುರುಪತಿ[3]ಪಾತದಿಂ [4]ಕೃತ[4]ಭಯಂಕರನರ್ಜುನಬಾಣಘಾತಜ— ।
ರ್ಝರಿತಶರೀರಸೈಂಧವಮುದಾತ್ತಬಲಾಂಬುಧಿಯುಂ ನಿಶಾತಶೌ— ॥
ಮರಹತಕರ್ಣಮಸ್ತಮಿತಶಲ್ಯ[5]ಶರಸ್ಥಿತಭೀಷ್ಮಸಾಹಸಂ[5] ।
ಮೊರೆಯೆನಿಸಿತ್ತು ಭಾರತಕೆ ಗೆಲ್ದ ರಣಂ †**ಕುಮರಾಂಕರಾಮನಾ** ॥೨॥

§ತುರಗಕಬಂಧದೊಳ್ ನರಶಿರಂಗಳ ವೀರಮಹಾಕಬಂಧದೊಳ್ ।
ಕರಿಶಿರಮಾಗ[ಲುತ್ಕ]ಟಕಬಂಧದೊ[ಳಾ] ಭಟರಂ ತಗುಳ್ದು ಡಾ— ॥

1 ಜಯಶ್ರೀಗೆ ಧರಾ1—ಮು. ಪು. ಪಾ.
2 ಭಾಗದೊಳುಂ ನೆಗೞ್ದು ದಿಶಾ2—ಮ. ಪ್ರ. ಪಾ. 2 ಭಾಗದೆ ನೆಗೞ್ದು ದರ್ಂದಿ2— ಮು. ಪು. ಪಾ.
3 ಕುರುಭುಜ3— ,, ,,
4 ಕುರು4— ,, ,,
5 ಮಹಾಕೃತಿಭೀಮಸಾಹಸಂ5— ,, ,,
† ೨ನೆಯ, ೩ನೆಯ, ೬ನೆಯ ಮತ್ತು ೭ನೆಯ ಪದ್ಯಗಳಲ್ಲಿ, ಮದ್ರಾಸು ಪ್ರತಿಯಲ್ಲಿ 'ಕುವರಾಂಕಭೀಮನಾ' ಎಂಬ ಪಾಠಾಂತರವಿದೆ.
§ ೩ನೆ ಪದ್ಯವು ಮದ್ರಾಸು ಪ್ರತಿಯಲ್ಲಿ ಮಾತ್ರ ಇದೆ.

ಮರು[ಗ]ಮೃಗಂಬೊಲಾದುದು ವಿನಾಯಕವಾಹನಂಬೊಲಾಯ್ತು [ನೋಡೆ] ಕೆ– |
ನ್ನರರಥನೊಂದೊಡೇವೊಗ*ಟ್ಟಿದಾ ರಣಮಂ ಕುಮರಾಂಕರಾಮನಾ || ೩ ||

ಸಮದವಿರೋಧಿಪತ್ಯದೊಳೆ ತದ್ರುಧಿರಾಂಬುನಿಮಜ್ಜನಾರ್ದ್ರಕ– |
ರ್ದಮಮಿಷುಘಾತಪಾತಿತಶಿರೋವಿಶಾಲನಟತ್ಕಬಂಧಬ– ||
ಭ್ರಮಮತಿರೌದ್ರಮಾಯ್ತು ಸಮಸನ್ನಮನೋಭವಸಿಕ್ತಲಂಪಟ |
ಭ್ರಮರಮನೇಕಭೂತನಿಳಯಂ ಸಮರಂ ಕುಮರಾಂಕರಾಮನಾ || ೪ ||

ಕುರುಧರೆಯಂ ನಿಜೋಗ್ರಗದೆಯೋರ್ಗಿಸುತ್ತಿ [1]ಸಮಸ್ತ[1]ವೈರಿಭೂ– |
ಪರ ರುಧಿರಾಂಬುವಿಂದೆ ಬೆದೆಮಾಡಿಯೆ ಘಟ್ಟಿತಕುಂಭಿಮುಕ್ತಧಾ– ||
ಸುರನವಮೌಕ್ತಿಕಪ್ರಸರಬೀಜಮನೋಳಿಯೆ ಬಿತ್ತಿ ತಾರಭೂ– |
ಧರಸಿತಕೀರ್ತಿಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ || ೫ ||

† ನುಡಿದುದಜೋಳ್ ತೊಡಳ್ನುಡಿದರಿಂದೊಡವಿಂಯುದೆ ಪೂಣ್ದು ಪೂಣ್ಕೆ [ವಾ– |
ನ್ನೊಡಮಿಜ]ವಲ್ಲಿ ಮೆಯ್ವಿಗೆವರೆಂದೊಡಮುನ್ನಮೆ ನಾಣ್ಚುವಂ ಮೊಗಂ– ||

---

1 ಗಿಯುತ್ತೆ 1–ಮು. ಪು. ಪಾ.

† ಮೈಸೂರು ಪ್ರತಿಯಲ್ಲಿ ಮತ್ತು ಮುದ್ರಿತ ಪುಸ್ತಕದಲ್ಲಿ ೬ನೆಯ ಪದ್ಯಕ್ಕೆ ಪ್ರತಿಯಾಗಿ ಕೊಡಲ್ಪಟ್ಟಿರುವ ಎರಡು ಪದ್ಯಗಳು ಹೀಗಿವೆ:—

ನುಡಿತೊಡಳಪ್ಪುದೊಂದಿಬರಿ ಮೆಯ್ದುಗೆದೋಡುವ ಕಾಳೆಗಕ್ಕೆ ಕ– |
ಣ್ಡೆಡೆವರ ಮಾತುಗೇಳೆ ಕಡುನಾಣ್ಚಿಯೆ ಮುಂಚುವನೆಂಬುದಾವಗಂ |
ಕುಡುವವರ್ಗೆಂದೊಡೇವೊಗಟ್ಟಿದೋ ನುಡಿ ಚಾಗದ ಕೀರ್ತಿವಲ್ಲಿ ದಾಂ– |
ಗುಡಿವಿಡೆ ಪೇಟಿವೇಟ್ಟಿದೆ ಗುಣಾಶ್ರಯ... ಕುಮರಂಕರಾಮನಾ (?) ||

ನುಡಿದುದೆ ಮೇಣ್ ತೊದಳ್ನುಡಿದುದೆಂದೊಡವಿಂಯುದೆ ಪೂಣ್ದುಪೂಣ್ಕೆವಾ |
ಣ್ಣೊಡಮಿಜವಲ್ಲಿ ಮೆಯ್ವಿಡೆದು ಪಿಂದಡಿಯಿಟ್ಟೊಡಮನ್ಯಕಾಂತೆ ಬಂ– |
ದೊಡಮಳಿಪಿಂದೆ ಸೋಲ್ತೊಡಮದಾಗದೆ ಅಂಬುಧಿ ಮೇರೆದಪ್ಪುಗುಂ |
ನಡುಗುಗು ಧಾತ್ರಿ ದಿಕ್ಕರಿ ಭಯಂಗೊಳುಗುಂ ಕುಮರಂಕರಾಮನಾ ||

ಗುಡಸನವರ್ಗ*ಂದೊಡೇಂ ನುಡಿಯು ಚಾಗ[ದ] ಬೀರದ ಕೀರ್ತಿ[ವಲ್ಲಿ]
ದಾ[ೞ-
ಗುಡಿ]ವಿಡೆ [ಪೇೞವೇೞ್ಪುದೊ] ಗುಣತ್ರಯ[ಮಂ] **ಕುಮರಾಂಕ**
**[ರಾ]ಮನಾ** ॥ ೬ ॥

§ವಸುಧೆಗೆ ಮೇರೆಯಾದುದು ಪಯೋಧಿ ಪಯೋಧಿಗೆ ಮೇರೆಯಾದುದೆ-
ಣ್ದೆಸೆ ದೆಸೆಗ[ಳ್ಗೆ] ಸೀಮೆ [ದಿಗಿ]ಭಾವಳಿಯಾಯ್ತು[ಸೆ] ಮಾಣದೆಲ್ಲಿಯುಂ॥
[ಪಸರಿಸಿ ತಾನೆ] ವಾ[ರಿಧಿ]ಯಿನತ್ತ ದಿಶಾಳಿಯಿನತ್ತ ದಿಗ್ಗಜ ।
ಪ್ರಸರದಿನತ್ತ ನೀಳ್ದು[ದು] ಯಶಃಪ್ರಕರಂ **ಕುಮರಾಂಕ[ರಾ]ಮನಾ**
॥ ೭ ॥

ಇಳೆಯೊಳದಂಕುರಿಸಿ ಹರಿ- ।
ತ್ಕುಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಹೃ- ॥
ತ್ಕುಳನಾರೀನಯನಾಂಬುವೆ ।
[1]ಬೆಳೆಯಿಸಿದುದು ಕೀರ್ತಿಲತಿಕೆಯಂ[1] ಸತ್ತಿಗನಾ ॥ ೮ ॥

ಎಂದು ಮುರಾಂತಕಂ ಪೊಗೞ್ದು ಕುರುಕುಲಾಂತಕನ ಮೊಗಮಂ ನೋಡಿ—

ಮುನಿಯಿಸಿದರಾತಿಯಂ ಕೊ- ।
ಲ್ವೆನೆಂದು ಪೂಣ್ದಂತೆ ಪೂಣ್ಕೆದಪ್ಪದೆ ಕೊಲ[2]ಲುಂ ॥
ನಿನಗಲ್ಲದೆ ತೀರ್ಗುಮೆ ಗೆ- ।
ಲ್ವೆನೆಂದು ನುಡಿದಂತೆ ಗೆಲ[ಲು]ಮ[2] ಜೀವಬೆಡಂಗಾ ॥ ೯ ॥

ಪೆಱರಾಳ ಪೆಱರ ಕುದುರೆಯ ।
ಪೆಱರಾನೆಯ ಪೆಱರ ರಥದ ಪೆರ್ವಲದಿಂದಂ ॥

---

§ ೭ನೆಯ ಪದ್ಯವು ಮದ್ರಾಸು ಪ್ರತಿಯಲ್ಲಿ ಮಾತ್ರ ಇದೆ.

1 ಬೆಳೆಸಿದುದೆನೆ ಕೀರ್ತಿವಲ್ಲಿಯುಂ 1 — ಮು. ಪು. ಪಾ.

2 ಲೇಂ ॥ ನಿನಗಲ್ಲದಿಂತು ತೀರ್ಗುಮೆ । ಅನುನಯದಿಂ ನುಡಿದ ಬಲ್ಮೆಯು2 — ಮು. ಪು. ಪಾ.

ಇಱಿವರ್ ಪೆಱರೇಕಾಂಗದಿ- ।
ನಿಱಿವವರಾರ್ ನಿನ್ನ ತೆಱದಿನಿಱಿವಬೆಡಂಗಾ ॥ ೧೦ ॥

ಜವನುಱೆ[1] ಬಱಿದವೊಲ್ ಕೌ- ।
ರವರೆಲ್ಲರ[1] ಕೊಂದು ಕೌರವೇಶ್ವರಬಲಮಂ ॥
ತವೆ[2]ಯಿಱಿದು ತೀರ್ಚಲೇಕಾಂ- ।
ಗವೀರ ನಿನ್ನನ್ನನಾವನಿಱಿವಬೆಡಂಗಾ ॥ ೧೧ ॥

ಮನೆ ಪೆಣ್ಣಂ ಮಕ್ಕಳೆಂಬೀ ನುಡಿ ಪುಸಿ ನಿಜಕೃಷ್ಣಾಂಗದೊಳ್ ಪುಟ್ಟಿ ಕೀರ್ತ್ಯಂ- ।
ಗನೆ ಶುಭ್ರಚ್ಛಾಯೆಯಾದಳ್ ಬಳೆದಳನಿಲಮಾರ್ಗಂಬರಂ ಪರ್ಬಿದಳ್ ದಿ- ॥
ಗ್ವನಿತಾಸಂದೋಹಮಂ ತಾನಿನಮಡಿಯಿಡುವಳ್ ಗೋತ್ರಶೈಲಾಗ್ರದೊಳ್ ಮ- ।
ಜ್ಜನಮಾ ವ್ಯೋಮಾಪಗಾವಾರಿಯೊಳೆನೆ ಪಿರಿದುಂ ಭುಂಭುಕಂ **ಸಾಹಸಾಂಕಂ** ॥ ೧೨ ॥

ಎಂದು ನಾರಾಯಣಂ ಚಾಳುಕ್ಯನಾರಾಯಣನ ಶೂರಕೃತ್ಯಂಗಳಂ ಪೊಗೞುತ್ತಿರ್ಪಿನಮಾಗಳ್ ಧೃತರಾಷ್ಟ್ರನುಂ ಗಾಂಧಾರಿಯುಂ ಬರಲ್ ಧರ್ಮನಂದನಂ ಪೊಡೆವಟ್ಟು—

ಈಯದೆ ಬಾಡಮುಯ್ದನಿಮಗೊಲ್ಲದೆ ಸಂಧಿಯನಯ್ಯ ನಿಮ್ಮ ಗಾಂ- ।
ಗೇಯರ ಮಾತುಗೇಳದಱಿಂ ಕುರುರಾಜನದರ್ಕೆ ದುಃಖದಿಂ ॥
ಬಾಯಱಿಯಲ್ಕೆವೇಡ ನಿಮಗಾಂ ಮಗನಲ್ಲೆನೆ ನೀಮೆ ತಂದೆಯುಂ ।
ತಾಯುಮಮೋಘಮಿನ್ನಮಗೆ ಪಾಂಡುಮಹೀಪತಿಯಿಂದಮಗ್ಗಳಂ ॥ ೧೩ ॥

ಎಂಬುದುಮಾ ಪ್ರಸ್ತಾವದೊಳ್ ದುರ್ಯೋಧನನ ಮಾದೇವಿಯರಪ್ಪ ಭಾನುಮತಿಯುಂ ಚಂದ್ರಮತಿಯುಂ ಮೊದಲಾದ ಅತಿರಥಮಹಾರ

---

1 ಕೊಲ್ವವೊಲಾ ಕೌರವರಂ ತವೆ1 — ಮು. ಪು. ಪಾ.

2 ಕೊಂದು ನಿನ್ನೊಲೇಕಾಂ । ಗ ವೀರನೆನೆ ನೆಗೞ್ದೆ — ಮು. ಪು. ಪಾ.

ಘಾರ್ಧರಥಪ್ರಮುಖಸಾಮಂತಮಾಂಡಲಿಕಾಂತಃಪುರಕಾಂತೆ ಯರೊಂದಾಗಿ ತಂತಮ್ಮ ಜೀವಿತೇಶ್ವರರಂ ಸಂಗ್ರಾಮರಂಗದೊಳರಸುತ್ತುಂ ಬಂದು ಕಾಣದೆ—

ಗಳಿತಾಶ್ರುಪ್ರ[1]ಕರಂ ಪಯೋಧರ[1]ತಟನ್ಯಸ್ತಾಂಬರಂ ಸ್ರಸ್ತಕುಂ- ।
ತಳ[2]ಭಾರಂ ಪರಿಗೆಟ್ಟ[2] ದೀನವದನಂ [3]ನಿರ್ಘಾತನಿಶ್ವಾಸಮಾ[3]- ॥
ಕುಳಚಿತ್ತಂ [4]ಪರಿವೇಷ್ಟಿತ[4]ಪ್ರಚುರಹಾಹಾ[5]ಕ್ರಂದನಂ[5] ಶೋಕವಿ- ।
ಹ್ವಳದಿಂ ಕೂಟ್ಗುದಿಗೊಂಡುದಾ ಕುರುಕುಲಕ್ಷ್ಮಾಪಾಲನಂತಃಪುರಂ ॥ ೧೪ ॥

‡ಶರಕೊಳೆ ಸತ್ತ ಯೂಥಪತಿಗ[ಳ್ ಪಡೆ] ವಾರಣ[ಪಾತದಿಂದೆ] ಚಾ- ।
ತುರ[ಚ]ತುರಂಗಸೇನೆ [ಕಿ]ಡೆ ಭೂರುಹವಿಲ್ಲದ ಬಳ್ಳಿಗಳ್ಗ[ದೇಂ] ॥
ದೊರೆಯೆನಿಸಿತ್ತೊ ಭೀಮಭುಜನಿರ್ದಳಿತಾ[ತ್ಮ]ನರೇಂದ್ರರಿಲ್ಲದು- ।
ಬ್ಬರಿಸಿದ ಶೋಕದಿಂದಬಲಿ ಕೋಟಲೆಗೊಳ್ವ [ತದಂಗನಾ]ಜನಂ ॥ ೧೫ ॥

†ಅಂತು ಶೋಕವಿಹ್ವಲರಾಗಿ ಬರ್ಪಲ್ಲಿ ಕೌರವನಿತಂಬಿನಿಯರ್ ಗಾಂಧಾರೀಧೃತರಾಷ್ಟ್ರರ ಕಾಲ ಮೇಲೆ ಕವಿದುಬಿಟ್ಟು—

ಎಲ್ಲಿದನೆಲ್ಲಿದಂ ಕುರುಮಹೀಪತಿಯೆಲ್ಲಿದನೆಲ್ಲಿದಂ ಮಹೀ ।
ವಲ್ಲಭನಿಂದುವಂಶತಿಲಕಾಹ್ವಯನೆಲ್ಲಿದನೆಲ್ಲಿದಂ ಲಸ- ॥
ತ್ಪಲ್ಲವಕೀರ್ತಿ ಚಾರುತರಮೂರ್ತಿ ಫಣೀಂದ್ರಪತಾಕನೆಲ್ಲಿ ತಾ- ।
ನೆಲ್ಲಿದನೆಲ್ಲಿದಂ ಗಡ ಮನಃಪ್ರಿಯನೆಲ್ಲಿದನೋ ಸುಯೋಧನಂ ॥ ೧೬ ॥

1 ವಿಲೋಚನಂ ಕುಚ 1— ಮು. ಪು. ಪಾ.
2 ಕೇಶಂಗತಪುಷ್ಪ 2— ,, ,,
3 ದೀರ್ಘೋರ್ [ದ್ಗತಾತ್ಯಾಹಿತಾ]3— ,, ,,
4 ಪರಿದೇವನ 4— ,, ,,
5 ರಾವಮುಂ 5— ,, ,,
‡ ೧೫ನೆಯ ಪದ್ಯವು ಮದ್ರಾಸು ಪ್ರತಿಯಲ್ಲಿ ಮಾತ್ರ ಇದೆ.
† ಇಲ್ಲಿಂದ ಮುಂದೆ ೧೭ನೆಯ ಪದ್ಯಪೂರ್ತಿಯಾಗಿ ಮದ್ರಾಸು ಪ್ರತಿಯಲ್ಲಿ ಇಲ್ಲ.

ಭಾನುಮತಿವದನಬಿಸರುಹ ।
ಭಾನು ಲಸಚ್ಚಂದ್ರಮತಿಮುಖೇಂದೀವರಜಂ ॥
ದ್ರಾ[1][ನನ][1]ನೆಲ್ಲಿದನೋ ರವಿ ।
ಸೂನುಮನಃಪ್ರಿಯನೆನಿಪ್ಪ ಕುರುಕುಲತಿಲಕಂ ॥ ೧೭ ॥

ಎಂದು ಕರುಣಾಕ್ರಂದನಂಗೆಯ್ವುದುಮಾಗಳದಂ ಕಂಡು ಧರ್ಮನಂದನನಂಧರಾಜಂಗಂ ಗಾಂಧಾರಿಗಂ ಪೊಡಮಟ್ಟು—

ನಿಮಗೆ ಬೆಸಕೆಯ್ವೆ[2]ಮಯ್ವರ್ ।
ಕ್ರಮದೆಮ್ಮಿಂ ಕೂಡಿಕೊಂಡು[2] ನೆಲನಂ ಪೂರ್ವ ॥
ಕ್ರಮದಿಂದಾ[3]ಳ್ದೆಮ್ಮ[ಂ] ನೋ- ।
ಡಿ ಮಱೆವು[ದಿಂ] ನಿಮ್ಮ ಸುತರನಂಧನೃಪಾಲಾ[3] ॥ ೧೮ ॥

ಎಂದು ಧರ್ಮನಂದನಂ ನುಡಿಯೆ ಧೃತರಾಷ್ಟ್ರನವಧಾರಿಸಿ—

[4]ಎಮಗಿನ್ನುಂ ಮಾನಸವಾ- ।
ಟಿ ಮೋಹಮಿಲ್ಲಿಂದು ನಿನ್ನನಿನಿತಂ [ಬೇಟಿಪ್ಪೆಂ] ॥
ಯಮಪುತ್ರನೆ [ಮೃತರಾದರ- ।
ಸು]ಮಕ್ಕಳ[ಂ] ಬೇಱೆ ಬೇಱೆ ತೋಱಿಸು ಮಗನೇ[4] ॥ ೧೯ ॥

ಎನೆ ಇದಾವ ಗಹನಮವರ್ಗಳ್ಗಂ ಸಂಸ್ಕಾರವಿಧಿಯಿಂ ಸಂಸ್ಕಾರಮಂ ಮಾಟಿಪ್ಪೆನೆಂದಾಗಳ್ —

1 ನೋಪೆ1 — ಮು. ಪು. ಪಾ.
2 ವೆಮ್ಮಿಂ । ಕ್ರಮದಿಂ ಬೆಸಕೆಯ್ಸಿಕೊಂಡು2 — ಮು. ಪು. ಪಾ.
3 ಳ್ವುದು ನೀಂ ನಿ । ಮ್ಮ ಮಕ್ಕಳಂ ಮಱೆದು ನೋಡಿಮೆಮ್ಮುಮನನಿಸಂ3 — ಮು. ಪು. ಪಾ.
4 ನಿಮಗೆಮಗಿನ್ನುಂ ಮಾನಸ ।
ನಿಮೋಹಮಿಲ್ಲೆಮಗಮೆಯೆ ನೀನನಿತಂ ಕೇಳ್ ॥
ಯಮನಂದನ [ಅಸು]ವೊಸರ್ದರ- ।
ಸುಮಕ್ಕಳಂ ಕುಡುವುದವರ ವನಿತೆಯರ್ಗೀಗಳ್4 ॥ — ಮು. ಪು. ಪಾ.

[1]ತನುಶೋಕಾನಳನಳುರಲ್ ।
ದಿನೇಶಸುತಸಂಗಮಹಿತಳಾಧಿಪರಾಘಾ- ॥
ತನಯುನ ಕಳೆಬರಮುಂ ಭೋಂ- ।
ಕನೆ ಕಂಡಳ್ ಕುಂತಿ ತನ್ನ ಚೊಚ್ಚಿಲ ಮಗನಂ[1] ॥ ೨೦ ॥

ಅಂತು ಕರ್ಣನ ಕಳೇಬರಮುಂ ತಬ್ಬಿಸಿ ಪುತ್ರನಂ ಕಂಡ ತೆಱದಿಂ ಪಱ ಯಿಸುವ ನಿಜಜನನಿಯುಂ ಕಂಡು ಪಾಂಡುನಂದನನಿದೇನೆಂದು ಬೆಸಗೊಳೆ-

ವನಜಾತಪ್ರಿಯಬಂಧುಗಂಗಪತಿಯುಂ ಧರ್ಮಂಗೆ ನಿನ್ನಂ ಕುತಾ- ।
ಶನಮಿತ್ರಂಗೆ ಬಕಾರಿಯುಂ [2]ಕುಲಿಶಿಗಂ[2] ಗಾಂಡೀವಿಯುಂ ಪೆತ್ತನಾ ॥
[3]ದಿನಕೃನ್ನಂದನನೆನ್ನ[3] ಚೊಚ್ಚಿಲ ಮಗಂ ನಿಮ್ಮಗ್ರಜಂ ಕರ್ಣನಾ- ॥
ನಿನಿತಂ ನಿಮ್ಮಯ ಮೋಹದಿಂದುಸಿರದಿರ್ದೆಂ ಕೊಂದೆನಯ್ ಧರ್ಮಜಾ
॥ ೨೧ ॥

ಎಂಬುದುಂ ಧರ್ಮನಂದನಾದಿಗಳತ್ಯಂತದುಃಖಿತರಾಗಿ ಇಂತೆಂದರ್-

[4]ಪಿರಿಯಣ್ಣಂ ಕ್ರಮದಾತನರ್ಕಸುತನೆಂದೇಕಿನ್ನಗಂ ಪೇಳದಿ- ।
ರ್ದಿರೊ ಮುಂ ಪೇಳ್ದೊಡೆ ಮಾತೆಗಾ ಪಿರಿಯನೆಮ್ಮಣ್ಣಂಗೆ ಸಾಮ್ರಾ
ಜ್ಯಭೂ- ॥
ಭರಮುಂ ಕೊಟ್ಟವನಾಳ್ದೊಡಂದೆ ಬೞಿಕಾವಾಳಾಗಿ ಸೌಭಾಗ್ಯದಿಂ- ।
ದಿರೆವೇ ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ ಕುಂತಿಯಂ[4]
॥ ೨೨ ॥

---

1 ಗಳಿಯಿಸೆ ಶೋಕಾನಲನಿಂ ।
ಜಳಜಾನನೆ ನೊಂದು ಬೆಂದು ನೆನೆದಲ್ಲಿಯೆ ಕಂ- ।
ಡಬಿಲುಣ್ಮಿ ಶೋಕರಸದಿಂ ।
ಪೞಯಿಸಿದಳ್ ಕೊಂತಿ ತನ್ನ ಚೊಚ್ಚಿಲ ಮಗನಂ1 – ಮು. ಪ್ರ. ಪಾ.
2 ಸುರಪಗಂ2–ಮು. ಪ್ರ. ಪಾ.
3 ಯಿನಗಂ ನಂದನನೆನ್ನ3–ಮು. ಪ್ರ. ಪಾ.
4 ಕರಮಿಂತೊಂದವಿವೇಕಮಂ ನೆಗೞ್ದಿರಂದೇಕಿಂತುಟಂ ಪೇೞದಿ- ।
ರ್ದಿರೆ ಪೇೞ್ದಿರ್ದೊಡಿದೇಕೆಕೂಡಿದಪುದೆಮ್ಮಣ್ಣಂಗೆ ಕರ್ಣಂಗೆಯುಂ-
ರ್ವರೆಯುಂ ಕೊಟ್ಟವನಾಳ್ದನಾಗೆ ಬೞಿಕಾವಾಳಾಗಿ ಸೌದರ್ಯದಾ ।
ಯಿರವಂ ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ ಕೊಂತಿಯುಂ4
ಮು. ಪ್ರ. ಪಾ.

[ಇಲ್ಲಿಂದ ಮುಂದಿನ ಮದ್ರಾಸು ಪ್ರತಿಯಲ್ಲಿಯ ಕಾವ್ಯಭಾಗವು ಪ್ರಕ್ಷಿಪ್ತವೆಂದು ತೋರುತ್ತದೆ. ಪಂಪ ಭಾರತದ ೧೪ನೆಯ ಆಶ್ವಾಸದ ಸಂಬಂಧಪಟ್ಟ ಗದ್ಯಪದ್ಯಗಳೊಡನೆ ಹೋಲಿಸಿರಿ. ಇದು ಕವಿರನ್ನಕೃತವೋ ಅನ್ಯಕೃತವೋ ಎಂದು ನಿರ್ಧರಿಸುವುದು ಬೇರೆ ಮೂಲಪತ್ರಿಕೆಗಳು ಸಿಕ್ಕುವ ತನಕ ಸಾಧ್ಯವಾಗಲಾರದು.]

§ ಎಂದು ಶೋಕಪರಾಯಣರಾದ ಪಾಂಡುನಂದನರ್ಗೆ ಕಾರಣಪುರುಷೋತ್ತಮನನೇಕದೃಷ್ಟಾಂತಂಗಳನೆ ಪೇೞ್ದು ಕ್ಷತ್ರಿಯಧರ್ಮಮಿಂತುಟೆ ವಲಮೆಂದು ಮನಃಕ್ಷತಂಬಿಡಲ್ವೇಡಿ ಸಂಸಾರಸ್ವರೂಪಮನಱಿದು ಸೈರಿಸುವುದೆಂದಱಿಪಿ ಸಂಬೋಧಿಸೆ ಸಮಾಧಾನಚಿತ್ತರಾಗಿ ವಿಧಿಪೂರ್ವಕದಿಂ ದುರ್ಯೋಧನಪ್ರಭೃತಿಗಳಪ್ಪ ಪಾರ್ಥಿವರ ಪೆಣಂಗಳನೊಂದಾಗೊಟ್ಟಿ ಕರ್ಣನ ಕಳೇಬರಮಂ ತರಿಸಿ ಇನಿಬರ ಕಳೇಬರದ ಮೇಲಿರಿಸಿ ಚಂದನಾದಿಸುರಭಿದ್ರವ್ಯಂಗಳಿಂ ಸಂಸ್ಕಾರಿಸಿದಿಂಬೞಿಕ್ಕೆ ಕರ್ಣಂಗೆ ಕರ್ಣಸ್ಥಳಿಯೆಂಬ ತೀರ್ಥಮಂ ಮಾಡಿ ಜಲದಾನಾದಿಪರೋಕ್ಷಲೋಕಕ್ರಿಯೆಗಳಂ ನಿರ್ವರ್ತಿಸಿ ತದನಂತರಂ ಕೊಂತಿಯುಂ ಗಾಂಧಾರಿಯುಂ ಧೃತರಾಷ್ಟ್ರನುಂ ಪಾಂಡವರನೊಡಂಬಡಿಸಿ ಪರಮಪಾವನಮಪ್ಪ ತಪೋವನಮನಾಶ್ರಯಿಸಿದರ್—

ಇತ್ತ ಧರ್ಮನಂದನಂ ದೇವಕೀನಂದನಂಗೆ ಕರಕಮಲಮುಕುಳಿತಾಂಜಲಿಯಾಗಿ—

---

§ಇಲ್ಲಿಂದ ಮುಂದೆ ದಶಮಾಶ್ವಾಸದ ಕೊನೆವರೆಗಿನ ಕಾವ್ಯಭಾಗವು ಮೈಸೂರು ಪ್ರತಿಯಲ್ಲಿ ಮತ್ತು ಮುದ್ರಿತ ಪುಸ್ತಕದಲ್ಲಿ ಕೆಳಗೆ ಕೊಟ್ಟಂತೆ ತೀರ ಭಿನ್ನವಾಗಿದೆ.

ಎಂಬುದುಂ ನಾರಾಯಣಂ ಕ್ಷತ್ರಿಯಧರ್ಮಮರ್ಮದಿಂದಾದುದಂ ಸೈರಿಸುವುದೆಂದವರಂ ವಿಗತಶೋಕರಂ ಮಾಡೆ ಸಮಾಹಿತಚಿತ್ತರಾಗಿ ದುರ್ಯೋಧನಪ್ರಭೃತಿಗಳ ಪೆಣಂಗಳನೊಂದೆಡೆಯೊಳಿಟ್ಟು ದ್ವಿಜರಿಂ ಸಂಸ್ಕಾರಕರ್ಮಮಂ ನಿರ್ವರ್ತಿಸಿ ಕರ್ಣನ ಕಳೇಬರಮಂ ಬ್ರಾಹ್ಮಣರಿಂ ತಾವೆ ಸಂಸ್ಕಾರಮಂ ಮಾಡಿ ಸಮಸ್ತರ್ಗಂ ಜಲದಾನಕ್ರಿಯೆಗಳಂ ನಿರ್ವರ್ತಿಸೆ ತದನಂತರಂ ಕೊಂತಿಯುಂ ಗಾಂಧಾರಿಯುಂ ಧೃತರಾಷ್ಟ್ರನುಂ ಕುರುನರೇಂದ್ರನರಸಿಯರ್ ಮೊದಲಾಗೆಲ್ಲರುಮನಶನದೀಕ್ಷೆಯಂ ಕಯ್ಕೊಂಡುತ್ತಮಮೋಕ್ಷಮಂ ತಾಳ್ದಿದರ್—

ಇತ್ತಲ್ ಧರ್ಮನಂದನಂ ಮುಕುಂದಂಗೆ ಕಯ್ಯಂ ಮುಗಿದು—

ಇನಿತೊಂದುಗ್ರಸಮಗ್ರಭಾರತಮಹಾಭಾರಾವತಾರಂ ಮುಕುಂ- ।
ದನಿಜಾನುಗ್ರಹದಿಂದಮಾಯ್ತು ಕಿಱಿಯಂ ಪಾರ್ಥಂ ಮಹೀಮೋಹಮಿ- ॥
ಲ್ಲೆನಗೀತಂ ಕುರು[ಯುದ್ಧ]ಲಬ್ಧಜಯನೀ ಭೀಮಂಗೆ ನೀಂ ಪಟ್ಟಬಂ- ।
ಧನಮಂ ಮಾಟ್ಟುದದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ ॥ ೨೬ ॥

ಎಂಬುದುಮಂಬುಜೋದರಂ ವೃಕೋದರಂಗೆ ಪಟ್ಟಬಂಧವಮಂ ಮಾಟ್ಟಿ ಬಗೆಯಂ ನಿವೇದಿಸೆ ವಾಸುದೇವಸಹಿತಂ ಸುಮುಹೂರ್ತದೊಳ್ ಧರ್ಮನಂದನಾದಿಗಳ್ ಪರಮಾನಂದದಿಂ ನಿಜಾನ್ವಯರಾಜಧಾನಿಯಪ್ಪ ಹಸ್ತಿನಾಪುರಕ್ಕೆ ಅಭಿಮುಖರಾಗೆ—

ನವಕಾಳಾಗರುಧೂಪಧೂಮನಿಜಸೌಗಂಧಂಗಳಿಂ ಸಯ್ತು ನೀ- ।
ಳ್ದು ವಿಯಚ್ಚಕ್ರದೊಳಲ್ಲಿ ಮಂಡಯಿಸಿ ದಿವ್ಯಾಮೋದದಿಂದೆಯ್ದೆ ತೋ- ॥
ರ್ಪ ವೊಲಾಗಿರ್ದುದು ಕಣ್ಗೆವಂದುದು ಪುರಶ್ರೀ ಪಾಂಡುಪುತ್ರರ್ಗಮು- ।
ತ್ಸವದಿಂದಂ ನೆರೆದಿರ್ದುದಾಂತು ಪಿಣಿಲಂ ಕೂರ್ತಂದು ಬಿಟ್ಟಂತೆವೋಲ್
॥ ೨೪ ॥

---

ಇನಿತೊಂದುಗ್ರಸಮಸ್ತಭಾರತಮಹಾಭಾರಾತಿಯುದ್ಧಂ ಮುಕುಂ- ।
ದನಿಜಾನುಗ್ರಹದಿಂದಮಾಯ್ತು ಕಿಱಿಯಂ ಪಾರ್ಥಂ ಮಹೀಮೋಹಮಿ- ॥
ಲ್ಲೆನಗೀತಂ ಕುರುವಂಶಲಬ್ಧಜಯನೀ ಭೀಮಂಗೆ ನೀಂ ಪಟ್ಟಬಂ- ।
ಧನಮಂ ಮಾಟ್ಪುದದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ ॥

ಎಂಬುದುಂ ಭೀಮಂಗೆ ಪಟ್ಟಬಂಧಮಂ ಮಾಟ್ಪುದೆಂದು ವಾಸುದೇವಂ ಮುಂತಾಗಿ ಸಹದೇವಂ ನಿರೂಪಿಸಿದ ಶುಭಮುಹೂರ್ತದೊಳ್ ಹಸ್ತಿನಪುರಮಂ ಪೊಕ್ಕು—

ದೆಸೆಯಂ ತೆಕ್ಕನೆ ತೀವೆ ತಾಟಿತಮಹಾಭೇರೀರವಂ ವಿಪ್ರರಿ- ।
ಣ್ದೆಸೆಯೊಳ್ ವೇದನಿನಾದದಿಂ ಪರಸೆ ಪಂಕೇಜಾಕ್ಷಿಯರ್ ಕೂಡೆ ಸಂ- ॥
ತಸದಿಂ ಸೇಸೆಯನಿಕ್ಕೆ ಪಾಂಡವಬಲಪ್ರಾಕಾರವೀರಂಗೆ ಸಾ- ।
ಹಸಭೀಮಂಗೆ ಮನೋಮುದಂಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ ॥

ಅಂತು ಪುರಜನಂಗಳಾಶೀರ್ವಾದಸಹಸ್ರಂಗಳೊಡನೆ ಸೂಸುವ ಸೇಸೆಗಳನಾನುತ್ತುಂ ಬಂದು ತತ್ಪುರಾಂಗನೆಯರ ಮುಖಸರಸಿಜಮಲರ್ದಂತೆ ಸೆದೊಪ್ಪುವ ರಾಜಮಂದಿರಮಂ ಪೊಕ್ಕು ಧರ್ಮನಂದನನುಂ ದೇವಕೀನಂದನನುಂ ತನ್ಮೊಳ್ ಪರಮಾನಂದಂಬೆರಸು ಭೀಮಂಗೆ ಪಟ್ಟಾಭಿಷೇಕಂಮಾಡಿಸೆಂದಾಗಳ್ —

ನೆಗ*ಟ್ವಿದು ದೇವದುಂದುಭಿರವಂ ಸುರನಂದನದಿಂ ಪೊದಟ್ಟಿ ಬ- ।
ಲ್ಮುಗುಳ್ಗ*ಳ ತಂದಲಂದು ಕವಿತಂದೊಡದಂ ತನಿಸೋಂಕು ಸೋಂಕಿ ಮೆ- ॥
ಲ್ಲಗೆಮಲಯಾನಿಲಂ ಸುಟಿದೊಡಂದು ಜಗಂ ಪೊಸತಾಯ್ತುದೆಂದೊಡೇ- ।
ಪೊಗ*ಟ್ವಿದೊ ಪಟ್ಟಬಂಧದ ಮಹೋತ್ಸವಮಂ **ಕುಮರಾಂಕ**
**[ರಾ]ಮನಾ** ॥ ೨೫ ॥

ಅಂತು ಸುಖಾಸನದೊಳಿರ್ದು ಧರ್ಮನಂದನಂ ದೇವಕೀನಂದನಂಗಿಂತೆಂದಂ—

ನಿಮ್ಮ ಬಲದಿಂದಮರಿನೃಪ- ।
ರವ್ಮಿಗೆ ಕೊಂದೆಮಗೆ ಸಕಲರಾಜ್ಯಶ್ರೀಯುಂ ॥
ನಿಮ್ಮ ದಯೆಯಿಂದೆ ಸಾರ್ದುದು ।
ನಿಮ್ಮುಪಕಾರಮನದೇತಱಿಂ ನೀಗುವೆನೋ ॥ ೨೬ ॥

ಎಂದು ವಚನರಚನೆಗಳಿಂ ಸ್ತುತಿಸಿ ಅನರ್ಘ್ಯವಸ್ತುವಾಹನಂಗಳ್ ಸಹಿತಂ ಮುಕುಂದನಂ ದ್ವಾರಾವತಿಗೆ ಕಳಿಪಿ—

---

ಅಂತು ಭೀಮಸೇನಂಗೆ ಪಟ್ಟಮಂ ಕಟ್ಟಿ ಹಸ್ತಿನಪುರದೊಳ್ ತನುಮಿತ್ರ ಯ್ಪರುಂ ಹಿಮಸೇತುವರಂ ಮಹಾಮಾಂಡಲಿಕರಿಂ ಬೆಸಕೆಯ್ಸಿಕೊಂಡು ಸುಖದಿಂ ರಾಜ್ಯಂಗೆಯ್ಯುತ್ತಿರ್ದರ್ —

ತೊರೆದುದೊ ಕಾಮಧೇನು ತುಱುಗಲ್ಗೊನೆ ಪಣ್ತುದೊ ಕಲ್ಪವೃಕ್ಷಮೀ– ।
ಶ್ವರನ ವರಪ್ರಸಾದಮಿದಿರ್ಗೊಂಡುದೊ ಕಣ್ಗೊಳಲಿಂತು ಮುತ್ತಿನಾ– ॥
ಗರಮೆ ತೆರಳ್ದುದೆಯ್ದೆ ರಸಸಿದ್ಧಿಯುಮಾಯ್ತೆನೆ ತನ್ನಸಾಸೆವ– ।
ಟ್ಟಿರೆದವರ್ಗಿತ್ತು ಪೊನ್ನಮಯಮಾಡಿದನೀ ನೆಲನಂ ಮರುತ್ಸುತಂ ॥ ೨೭ ॥

ಪಸದನಮಾವುದಾವ ರುತುವಿಂಗಮದೊಪ್ಪುಗುಮಾವ ಪೊೞ್ತುದಾ– ।
ವೆಸಕದೊಳೊಂದುಗುಂ ವಿನಯಮಾವೆಡೆಗಾವುದು ಚೆಲ್ವುವೆತ್ತ ರಂ– ॥
ಜಿಸುಗುಮದರ್ಕದಂ ತಿಳಿದು ನಿಚ್ಚಲುಮಾ ಬಿಯಮಾ ವಿನೋದಮಾ ।
ಪಸದನಮಾ ವಿಳಾಸದೊಳೊಡಂಬಡೆ ಭಾವಿಪರಾ ಪೃಥಾಸುತರ್ ॥ ೨೮ ॥

ಅಂತು ಸುಖ[ದಿಂ] ರಾಜ್ಯಂಗೆಯ್ಯುತ್ತುಮಿರೆ—

**ಛಲದೊಳ್ ದುರ್ಯೋಧನಂ** ನನ್ನಿಯೊಳಿನತನಯಂ **ಗಂಡಿನೊಳ್ ಭೀಮಸೇನಂ** ।
ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ– ॥
ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ– ।
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲೆಸಿಪಿವರಿಂ **ಭಾರತಂ ಲೋಕಪೂಜ್ಯಂ** ॥ ೨೯ ॥

---

ಶಕಸಮಗಶಿಋತುಯುಗಶಶಿ ।
ನಿಕರಾಂಕಂ ಚಿತ್ರಭಾನು [ಸಂವತ್ಸರ] ಕಾ– ॥
ರ್ತಿಕಸಿತಸಪ್ತಮಿ[ದಿನದೊಳ್] ।
ಸುಕರಂ ಬುಧಸೇವ್ಯಮಾಯ್ತು ರನ್ನನ ಕಾವ್ಯಂ ॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಚ್ಛಾಯಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ **ಶ್ರೀಸಾಹಸಭೀಮವಿಜಯದೊಳ್ ಹಸ್ತಿನಾಪುರಪ್ರವೇಶವರ್ಣನಂ** ದಶಮಾಶ್ವಾಸಂ

ಅಂತು ಆಶ್ವಾಸ ೧೦ಕ್ಕಂ **ರನ್ನಗದಾಯುದ್ಧಂ**

ಸಂಪೂರ್ಣಂ

॥ ಮಂಗಳ ಮಹಾಶ್ರೀಃ ॥

---

**ಗದ್ಯ॥** ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ **ಶ್ರೀಸಾಹಸಭೀಮವಿಜಯದೊಳ್ ಭೀಮಸೇನಪಟ್ಟಾಭಿಷೇಕವರ್ಣನಂ** ದಶಮಾಶ್ವಾಸಂ ॥

[ಇಲ್ಲಿಂದ ಮುಂದೆ ಮೈಸೂರು ಪ್ರತಿಯಲ್ಲಿ— ಅಂತು ಆಶ್ವಾಸ ೧೦ಕ್ಕಂ ವೃತ್ತ ೧೭೬ಕ್ಕಂ ಕಂದ ೪೦೧ಕ್ಕಂ ವಚನ ೧೮೫ಕ್ಕಂ ಗದ್ಯಸಹ ೭೭೦ಕ್ಕಂ ಮಂಗಳ ಮಹಾಶ್ರೀ ಶ್ರೀ — ಕವಿರನ್ನವಿರಚಿತಚಾಳುಕ್ಯಚಕ್ರವರ್ತಿಸಾಹಸಭೀಮಸೇನಕಾವ್ಯಮಿದಂ ಶಕವರುಷ ೧೨೬೪ನೆ ಚಿತ್ರಭಾನು ಸಂವತ್ಸರದಲ್ಲಿ ಮಾಡಿದ ಕಾವ್ಯ॥ ಶ್ರೀ—ಎಂದು ಇದೆ.]



